# ನಾಡೋಜ

## ಬಿ.ಎಂ.ಶ್ರೀ





ಎಂ. ವಿ. ಸೀತಾರಾಮಯ್ಯ

ರಾಘವ ಪ್ರಕಾಶನ, ಬೆಂಗಳೂರು-19

ಬಿ. ಎಂ. ಶ್ರೀ. ಜನ್ಮಶತಮಾನೋತ್ಸವ ಸಂಸ್ಮರಣ ಪ್ರಕಟನೆ.

# ನಾಡೋಜ ಬಿ. ಎಂ. ಶ್ರೀ



ಎಂ. ವಿ. ಸೀತಾರಾಮಯ್ಯ

ರಾಘವ ಪ್ರಕಾಶನ
54, 3ನೆಯ ಅಡ್ಡಬೀದಿ,
ಗವಿಪುರ ವಿಸ್ತರಣ
ಬೆಂಗಳೂರು-560 019

ಬೆಲೆ : ರೂ. 5.

B. M. SRI BIRTH CENTENARY COMMEMORATIVE PUBLICATION

*NADOJA B. M. SREE* (B.M.Sree-a Teacher of Kannada Country): A Collection of reminiscential articles on the late Professor B. M. Srikantia (1884-1946), Professor of English & Honorary Professor of Kannada, University of Mysore and Vice-President of the Kannada Literary Academy (1938 - 1942) and Principal, K. E. Board College, Dharwad (1944-1946), Poet and Playwright, by Prof. M. V. Seetha Ramaiah, a student of the great teacher; Published by Raghava Prakashana, 54, Aravinda, Gavipuram Extension, Bangalore-560 019. Crown 8vo., pp. 68+iv; 1984.



**Price Rs. 5-00**







Printers:
SRI RAMAKRISHNA POWER PRESS
1ST CROSS, GAVIPURAM EXTENSION
BANGALORE-560 019

# ಬಿನ್ನಹ

ನನ್ನ ಗುರುಹಿರಿಯರ ಪಂಕ್ತಿಗೆ ಸೇರಿದ, ನನ್ನ ಭಕ್ತಿಗೌರವಗಳಿಗೆ ಪಾತ್ರರಾದ, ಪ್ರೊ|| ಟಿ. ಎಸ್. ವೆಂಕಣ್ಣಯ್ಯ, ಪ್ರೊ|| ತೀ. ನಂ. ಶ್ರೀ., ಡಾ|| ರಾಳ್ಲಪಲ್ಲಿ ಅನಂತಕೃಷ್ಣ ಶರ್ಮ, ಡಾ|| ಡಿ. ವಿ. ಜಿ., ಡಾ|| ಎ. ಆರ್. ಕೃ., ಸಂಗೀತಶಾಸ್ತ್ರರತ್ನ ಕೆ. ವಾಸುದೇವಾಚಾರ್ಯ, ಚಿತ್ರಕಲಾಪ್ರವೀಣ ಕೆ. ವೆಂಕಟಪ್ಪ,ಮುಂತಾದ ಪ್ರಾತಃಸ್ಮರಣೀಯರನ್ನು ಕುರಿತು ನುಡಿಚಿತ್ರಗಳನ್ನು ಸಮಯ ಸಂದರ್ಭ ಒದಗಿಬಂದಂತೆ ಬರೆಯುವ ಸದವಕಾಶಗಳು ಒದಗಿ ಬಂದವು. ಈ ಬರಹಗಳು ಬೇರೆ ಬೇರೆ ಸಂಭಾವನಾ ಗ್ರಂಥಗಳಲ್ಲೂ ಕೆಲವು ಪತ್ರಿಕೆಗಳ ವಿಶೇಷ ಸಂಚಿಕೆಗಳಲ್ಲೂ ಈ ಮೊದಲೇ ಪ್ರಕಟವಾಗಿವೆ. 1947ರಷ್ಟು ಹಿಂದೆಯೇ, ಬಿ. ಎಂ. ಶ್ರೀ. ತೀರಿಕೊಂಡ ಮರುವರ್ಷ, ಬಿ. ಎಂ. ಶ್ರೀ. ಅವರನ್ನು ಕುರಿತು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಭಾಷಣ ಮಾಡಿದ್ದೆನಾದರೂ ಅದನ್ನು ಬರಹಕ್ಕೆ ಇಳಿಸುವ ಮನಸ್ಸುಮಾಡಲಿಲ್ಲ.

ಈ ವರ್ಷ 'ಬಿ. ಎಂ. ಶ್ರೀ. ಜನ್ಮ ಶತಮಾನ ವರ್ಷ' ಎಂದು ಆ ಮಹಾನುಭಾವರನ್ನು ಸ್ಮರಿಸಿಕೊಳ್ಳುವ ಭಾಗ್ಯ ನಾಡಿಗೆ ದೊರಕಿತು. ಹೋದ ವರ್ಷವೇ ಪ್ರಜಾವಾಣಿಯ ಸಂಪಾದಕರ ಕೋರಿಕೆಯಂತೆ ಅವರ ವಿಶೇಷ ಸಂಚಿಕೆಗೆ ಬಿ. ಎಂ. ಶ್ರೀ. ಅವರ ಜೀವನ ಮತ್ತು ಸಾಧನೆಯನ್ನು ಕುರಿತು ಒಂದು ಲೇಖನ ಬರೆದುಕೊಟ್ಟೆನು. ಇತರ ಪತ್ರಿಕೆಗಳಿಗಾಗಿ ಬರೆದ ಲೇಖನಗಳೂ ಇಲ್ಲಿವೆ. ಈ ಲೇಖನಗಳನ್ನು ಮೊದಲು ಪ್ರಕಟಿಸಿದ ಪತ್ರಿಕೆಗಳಿಗೆ ನಾನು ಋಣಿ. ಈ ಎಲ್ಲ ಲೇಖನಗಳ ಸಂಕಲನವೇ 'ನಾಡೋಜ ಬಿ. ಎಂ. ಶ್ರೀ.'

ನನ್ನ ಸಾಹಿತ್ಯ ಜೀವನದ ದಾರಿಯನ್ನು ತೋರಿಸಿ, ನನ್ನಲ್ಲಿ ಕನ್ನಡದ ಅಭಿಮಾನವನ್ನು ಬಿತ್ತಿಬೆಳಸಿ, ನನ್ನ ಸ್ಮೃತಿಮಂದಿರದಲ್ಲಿ ಪೂಜಾಮೂರ್ತಿಯಾಗಿ ನೆಲಸಿರುವ 'ಶ್ರೀಗುರು'ವಿನ ದಿವ್ಯ ಸ್ಮರಣೆಗೆ ಈ ಚಿಕ್ಕ ಕೃತಿಯನ್ನು ಭಕ್ತಿಭಾವದಿಂದ ಅರ್ಪಿಸುತ್ತಿದ್ದೇನೆ.

ಈ ಪುಸ್ತಕದ ಮುದ್ರಣ ಮುಂತಾದ ವೆಚ್ಚಗಳನ್ನು ಕಳೆದು ಉಳಿಯುವ ಲಾಭಾಂಶವನ್ನು ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನಕ್ಕೆ ಕಾಣಿಕೆಯಾಗಿ ಅರ್ಪಿಸಲು ಸಂಕಲ್ಪವಿರುವುದರಿಂದ, ಕನ್ನಡದ ಅಭಿಮಾನಿಗಳು ಪುಸ್ತಕವನ್ನು ಕೊಂಡು ಓದಿ ಆ ಕಾಣಿಕೆಕೊಡುಗೆಯಲ್ಲಿ ಭಾಗಿಗಳಾಗ ಬೇಕೆಂದು ಪ್ರಾರ್ಥಿಸುತ್ತೇನೆ.

ಬೆಂಗಳೂರು–19.
20–6–1984

ಎಂ. ವಿ. ಸೀತಾರಾಮಯ್ಯ

# ಕನ್ನಡಕ್ಕೆ ಒಲಿದು ಬಂದ 'ಶ್ರೀ'

1984ರ ಜನವರಿ 3ನೆಯ ತಾರೀಕು, ಹಾಗೂ 5ನೆಯ ತಾರೀಕು ಈ ಎರಡು ದಿನಗಳು ಕನ್ನಡಿಗರೆಲ್ಲರೂ, ಅವರು ಎಲ್ಲಿಯೇ ಇರಲಿ, ಕೃತಜ್ಞತೆಯಿಂದ ನೆನೆಯಬೇಕಾದ ಪವಿತ್ರ ದಿನಗಳು. ಒಂದು ಶ್ರೀ ಅವರ ನೂರನೆಯ ಜನ್ಮದಿನ, ಇನ್ನೊಂದು ಅವರ ನೂರನೆಯ ಪುಣ್ಯದಿನ.

ಶ್ರೀ ಅವರ ಹುಟ್ಟಿನೊಂದಿಗೆ ಕನ್ನಡದ ಅರುಣೋದಯದ ಹೊಂಗಿರಣಗಳು ನಾಡಿನ ಕತ್ತಲೆಯನ್ನು ಚೆದರಿಸತೊಡಗಿದ್ದವು. ಅವರ ಪ್ರಾಯದ ದಿನಗಳಲ್ಲಿ ಹೊಸ ಬೆಳಗು ನಾಡನ್ನು ಬೆಳಗಿತು. ಅವರ ಅವಸಾನದ ತರುವಾಯ ಕನ್ನಡದ ಒಂದು ಯುಗ ನವೋದಯ ಯುಗ ಸಂಪೂರ್ಣವಾಗಿ ಅಲ್ಲದಿದ್ದರೂ ಬಲುಮಟ್ಟಿಗೆ ಕೊನೆಗೊಂಡಂತೆ ಆಯಿತು.

ಕನ್ನಡದ ಈ ನವೋದಯ ಯುಗದ ನಿರ್ಮಾಪಕರು, ಆಧುನಿಕ ಕಾವ್ಯದ ಶಿಲ್ಪಿ, 'ಶ್ರೀ' ಎಂದು ಕನ್ನಡ ಕಾವ್ಯ ಪ್ರಪಂಚದಲ್ಲಿ ದೊಡ್ಡ ಹೆಸರಾಗಿದ್ದವರು, ಆಚಾರ್ಯ ಬಿ.ಎಂ.ಶ್ರೀಕಂಠಯ್ಯನವರು.

ಕಾಲೇಜಿನ ದಿನಗಳಲ್ಲಿ (ಬಿ.ಎಂ.ಶ್ರೀ ಅವರು ಬಿ.ಎ. ಪರೀಕ್ಷೆ ಮಾಡಿದ್ದು, ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ) ಅವರು ಐಚ್ಛಿಕ ಕಲಾ ವಿಷಯಗಳೊಂದಿಗೆ ಕಲಿತ ಭಾಷೆಗಳೆಂದರೆ ಕನ್ನಡ ಮತ್ತು ಇಂಗ್ಲಿಷು. ಅಧ್ಯಾಪಕನಾಗಬೇಕೆಂದು ಅವರು ಪ್ರಬಲವಾದ ಇಚ್ಛೆ ಹೊಂದಿದ್ದಂತೆ ತೋರುವುದಿಲ್ಲ. ಅವರ ತಂದೆ ಬೆಳ್ಳೂರು ಮೈಲಾರಯ್ಯನವರು ಶ್ರೀರಂಗಪಟ್ಟಣದಲ್ಲಿ ವಕೀಲರು. ತಮ್ಮಂತೆ ಮಗನೂ ಲಾಯರ್ ಆಗಬೇಕೆಂದು ಅವರೇ ಇಷ್ಟಪಟ್ಟಿದ್ದರೋ ಇಲ್ಲ ತಂದೆಯ ಸಿದ್ಧವಾಗಿದ್ದ ಲಾಯರ್ ಕಛೇರಿ ಇದ್ದದ್ದರಿಂದ ಬೇರೆ ಯಾವ ಕೆಲಸವೂ ದೊರಕದೆ ಹೋದರೆ ಲಾಯರ್ ಆಗಬಹುದು ಎಂಬ ಧೀಮು ಇಟ್ಟುಕೊಂಡಿದ್ದರೋ, ಅದು ಹೇಗಾದರೂ ಇರಲಿ, ಬಿ.ಎ. ಮಾಡಿದ ಕೂಡಲೆ ಮದರಾಸಿಗೆ ಹೋಗಿ ಲಾಯರ್ ಪರೀಕ್ಷೆ (1906), ಆ ಬಳಿಕ ಇಂಗ್ಲಿಷ್ ಎಂ. ಎ. ಮಾಡಿದರು (1907). ಅವರು ಮನಸ್ಸುಮಾಡಿದ್ದರೆ ಅವರ ಷಡ್ಡಕ ಎಸ್. (ಸಕಲೇಶಪುರದ)

ಶ್ರೀಕಂಠಯ್ಯನವರಂತೆ ಬೆಂಗಳೂರಿನಲ್ಲಿ ನೆಲಸಿ ಪ್ರಸಿದ್ಧರಾದ ಅಡ್ವೊಕೇಟ್ ಆಗಬಹುದಾಗಿತ್ತು. ಆಗಲಿಲ್ಲ, ಕನ್ನಡದ ಪುಣ್ಯ. ಆದರೆ ಅಮಲ್ದಾರರಾಗಿ ಡೆಪ್ಯುಟಿ ಕಮಿಷನರ್ ಪದವಿಗೆ ಏರಬೇಕೆಂಬ ಆಸೆ ಆಗಿನ ಕಾಲದ ಮೇಧಾವಿ ಪದವೀಧರರಿಗೆ ಇದ್ದಂತೆ ಅವರ ಮನಸ್ಸನ್ನು ಹೊಕ್ಕು ಕಾಡಿತೇನೋ, ಎಂ. ಸಿ. ಎಸ್. (ಮೈಸೂರು ಸಿವಿಲ್ ಸರ್ವಿಸ್) ಪರೀಕ್ಷೆಗೆ ಕುಳಿತು ಅದರಲ್ಲಿ ನಾಪಾಸಾದರು. ಇದೂ ಕನ್ನಡದ ಪುಣ್ಯ.

ಕನ್ನಡದ ಪುಣ್ಯವೇನೋ ಸರಿ. ಕಲಿತ ಮಂದಿಯಲ್ಲಿ ಕಾಲ ವೈಪರೀತ್ಯದಿಂದ ಪ್ರಬಲಿಸಿದ್ದ ಇಂಗ್ಲಿಷ್ ವ್ಯಾಮೋಹ, ಸಂಸ್ಕೃತದ ನಂಟನ್ನು ಅಂಟಿಸಿಕೊಂಡಿದ್ದ ಬ್ರಾಹ್ಮಣ ಜನ್ಮ-ಈ ಹಿನ್ನೆಲೆ ಯಲ್ಲಿ, ಇಂಗ್ಲಿಷ್ ಸಾಹಿತ್ಯಕ್ಕೆ ಒಲಿದಿದ್ದ ಆಂಗ್ಲಪ್ರೇಮೀ (anglo-phile) ಯುವಕ, ಕನ್ನಡಕ್ಕೆ ತಿರುಗಿದ್ದು ಹೇಗೆ? ಇದು ಮೇಲುನೋಟಕ್ಕೆ ಅಸಂಭಾವ್ಯ ಸಂಗತಿಯಾಗಿ ಕಂಡರೂ ಒಳಹೊಕ್ಕು ಆರೈದರೆ ಅವರ ಕನ್ನಡದೊಲವು ಅವರ ನೆತ್ತರಲ್ಲಿಯೆ ಬಿತ್ತವಾಗಿದ್ದು ಅನುಕೂಲ ಪರಿಸರದಲ್ಲಿ-ಪುನರುಕ್ತಿಯಾದರೂ ಚಿಂತೆಯಿಲ್ಲ, ಕನ್ನಡದ ಪುಣ್ಯ ಎನ್ನೋಣ-ಮೊಳೆತು, ಚಿಗುತು ಹೂಬಿಟ್ಟಿತು, ಹಣ್ಣು ಕೊಟ್ಟಿತು.

ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಬೆಳ್ಳಾವೆ ವೆಂಕಟ ನಾರಾಯಣಪ್ಪನವರು ಅವರ ಗುರುಗಳು. "ಕರ್ಣಾಟಕ" ಸಾಹಿತ್ಯ ಪರಿಷತ್ತಿಗೆ ಕಲ್ಲು ಮಣ್ಣು ಹೊತ್ತು ಜೆವರು ಸುರಿಸಿದವರು ಅವರು; ಅದರ ಕಸ ಗುಡಿಸಿದವರು ಅವರು; ಕನ್ನಡದಲ್ಲಿ ವಿಜ್ಞಾನ ಸಾಹಿತ್ಯದ ಆದ್ಯ ಪ್ರವರ್ತಕರು. ಇವರ ಕನ್ನಡದ ಅಭಿಮಾನದ ಸೋಂಕು ಶಿಷ್ಯನಿಗೂ ತಗುಲಿದ್ದರೆ ಆಶ್ಚರ್ಯವಿಲ್ಲ. ಇದಕ್ಕೂ ಮುನ್ನ ಉಭಯಭಾಷಾ ವಿಶಾರದರೂ ಉಭಯ ವ್ಯಾಕರಣ ಪಂಡಿತೋ ತ್ತಮರೂ ಕಾವ್ಯ ರಸಿಕರೂ ಆಗಿದ್ದ ಕಾನಕಾನಹಳ್ಳಿ ವರದಾ ಚಾರ್ಯರು ಅವರ ಇನ್ನೊಬ್ಬ ಗುರುಗಳು. ಆ ಕನ್ನಡ ಪಂಡಿತರ ವೇಷ ಭೂಷಣಗಳು ಅಂದಿನ ಘನ ವಿದ್ವಾಂಸರಿಗೆ ಒಪ್ಪುತ್ತಿದ್ದುವಂಥವು

ಆದರೂ, ಅಂದಿನ "ಆಧುನಿಕ" ಯುವಕರಿಗೆ ಹಾಸ್ಯಾಸ್ಪದವಾಗಿದ್ದುವು. ಕನ್ನಡ ಪಂಡಿತರಿಗೆ ಈಷದಪಿ ಗೌರವ ಇಲ್ಲದಿದ್ದ ಕಾಲದಲ್ಲಿ ಅವರು ಕಾಲೇಜಿನ ವಿದ್ಯಾರ್ಥಿಗಳನ್ನು ಹತೋಟಿಯಲ್ಲಿಟ್ಟುಕೊಳ್ಳುತ್ತಿದ್ದ ರೀತಿ ಅನ್ಯಾದೃಶ, ಹಳಗನ್ನಡ ಕಾವ್ಯಗಳ ನೀರಸ ಭಾಗಗಳನ್ನೂ ತಮ್ಮ ಬೋಧನ ಕೌಶಲದಿಂದ, ತಮ್ಮದೇ ಶೈಲಿಯ ಗಮಕವಾಚನ ವೈಖರಿಯಿಂದ ಆಕರ್ಷಕವನ್ನಾಗಿ ಮಾಡುತ್ತಿದ್ದರು. ಒಂದು ವರ್ಷ ಮಾತ್ರ ನನಗೂ ಗುರುಗಳಾಗಿದ್ದ ಇವರು ಬಿ. ಎಂ. ಶ್ರೀ. ಅವರ ಗುರುಗಳೂ ಆಗಿದ್ದರು ಎನ್ನುವುದು ನನಗೆ ಹೆಮ್ಮೆಯ ವಿಷಯ. ಬನುಮಯ್ಯನವರ ಕೊಲಿಜಿಯೇಟ್ ಹೈಸ್ಕೂಲಿನಲ್ಲಿ ನಾನು ಜೂನಿಯರ್ ಇಂಟರ್‌ಮೀಡಿಯೆಟ್ ತರಗತಿಯ ವಿದ್ಯಾರ್ಥಿ (1928). ಜೈಮಿನಿ ಭಾರತದ "ಚಂದ್ರಹಾಸನ ಬಾಲ್ಯ"ದ ಪ್ರಕರಣವನ್ನು ಗುರುಗಳು ಪಾಠ ಮಾಡಲು ತೊಡಗಿದ್ದಾರೆ. ವರದಾಚಾರ್ಯರು ಯಾವಾಗಲೂ ಕುರ್ಚಿಯನ್ನು ಬಿಟ್ಟು ಮೇಜಿನ ಮೇಲೆ ಪದ್ಮಾಸನ ಹಾಕಿ ಕುಳಿತು, ನೆಪಕ್ಕೆ ಕೈಲಿ ಪುಸ್ತಕ ಹಿಡಿದು, ಮಾಜೋವಿಧೇಯವಾಗಿದ್ದ ಪದ್ಯಗಳನ್ನು ಸರಾಗವಾಗಿ ವಾಚನ ಮಾಡಿ ವ್ಯಾಖ್ಯಾನಿಸುವುದು ಅವರ ರೂಢಿ. ಹೀಗೆ ಪಾಠಮಾಡುತ್ತಿದ್ದಾಗ, ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಪದವಿಯ ಜೊತೆಗೆ ಗೌರವ ಕನ್ನಡ ಪ್ರಾಧ್ಯಾಪಕರೂ ಆಗಿದ್ದ ಬಿ. ಎಂ. ಶ್ರೀ ಪಾಠಪ್ರವಚನಪರೀಕ್ಷಕರಾಗಿ ತರಗತಿಯ ಕೋಣೆಗೆ ಬಂದರು. ಶಾಲೆಯ ಸೇವಕ ಒಂದು ಕುರ್ಚಿಯನ್ನು ತಂದು ವೇದಿಕೆಯ ಪಕ್ಕದಲ್ಲಿ ಇರಿಸಿದ. ಬಹುಶಃ ಅನಿರೀಕ್ಷಿತವಾಗಿದ್ದದ್ದು, ಬಿ. ಎಂ. ಶ್ರೀಯವರ ಈ ಅಧಿಕಾರನಿಮಿತ್ತದ ಭೇಟಿ. ವರದಾಚಾರ್ಯರು ಅಧಿಕಾರಿಗೆ ತಕ್ಕ ಗೌರವ ಸೂಚಿಸುವ ಸಲುವಾಗಿ ಮೇಜಿನಮೇಲಿಂದ ಕೆಳಕ್ಕೆ ಇಳಿಯಲು ಚಡಪಡಿಸಿದರು; ಸ್ವಲ್ಪ ಜಾರಿದ್ದ ಶಾಲನ್ನು ಸರಿಪಡಿಸಿಕೊಂಡರು; ಸಡಿಲವಾಗಿದ್ದ ಶಾಲಿನ ರುಮಾಲಿಗೆ ಬುದ್ಧಿ ಕಲಿಸಹೋಗಿ ಅದು ಬಿಚ್ಚಿಕೊಂಡಿತು. ಬಿ. ಎಂ. ಶ್ರೀಯವರ ಮುಖದ ಮೇಲೂ ಒಂದು ತೆಳ್ಳನೆಯ ಮುಗುಳುನಗೆ ಹಾದುಹೋಯಿತು. ವರದಾಚಾರ್ಯರು

ರುಮಾಲನ್ನು ಬಿಗಿಪಡಿಸಿಕೊಂಡ ಮೇಲೆ, ಬಿ. ಎಂ. ಶ್ರೀಯವರು– "ನಮಗೂ ತಾವು ಹೀಗೇಯೇ ಅಲ್ಲವೆ ಪಾಠ ಹೇಳುತ್ತಿದ್ದದ್ದು. ತಾವು ದಯವಿಟ್ಟು ಮೊದಲಿನ ಹಾಗೆಯೇ ಪಾಠ ಮುಂದುವರಿಸ ಬೇಕು. ನಾನು ತಮ್ಮ ಪಾಠವನ್ನು ಕೇಳುವುದಕ್ಕೆ ಬಂದಿದ್ದೇನೆಯೇ ಹೊರತು ಪರೀಕ್ಷೆ ಮಾಡುವುದಕ್ಕಲ್ಲ", ಎಂದರು. ಪಾಠ ಮುಂದು ವರಿಯಿತು. ಬಿ. ಎಂ. ಶ್ರೀ. ಪಕ್ಕದಲ್ಲೆ ಕುಳಿತಿರುವುದರ ಪರಿವೆಯೇ ಇಲ್ಲ ಎಂಬಂತೆ ಗುರುಗಳು ಪಾಠ ಮಾಡಿದರು. ತುಂಟ ವಿದ್ಯಾರ್ಥಿ ಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳಲು ಪ್ರಯೋಗಿಸುತ್ತಿದ್ದ ವಾಗ್ದಂಡನೆಯ ಚುಚ್ಚುಹಾಸ್ಯ ಇರದಿದ್ದರೂ, ಅಂದಿನ ಪಾಠ ಅಮೋಘವಾಗಿತ್ತು. ಬಿ. ಎಂ. ಶ್ರೀ. ಪೀರಿಯಡ್ ಪೂರ್ತಿ ಕುಳಿತಿದ್ದು, ಎದ್ದುಹೋಗುವ ಮುನ್ನ–"ನಿಮ್ಮ ಪಾಠ ಕೇಳಿದ ಯಾವ ಶಿಷ್ಯನಿಗೆ ತಾನೆ ಕನ್ನಡ ಕಾವ್ಯದಲ್ಲಿ ಪ್ರೀತಿ ಹುಟ್ಟುವುದಿಲ್ಲ" ಎಂದು, ನಮಸ್ಕರಿಸಿ ತೆರಳಿದರು. ಈ ಪ್ರಸಂಗವನ್ನು ಬೆಳಸಿದ್ದರ ಉದ್ದೇಶ, ಹಳಗನ್ನಡ ಕಾವ್ಯದಲ್ಲಿ ಬಿ. ಎಂ. ಶ್ರೀ. ಅವರಿಗೆ ಆಸಕ್ತಿ ಹುಟ್ಟಲು ವರದಾಚಾರ್ಯರ ಬೋಧೆ ಒಂದು ಮುಖ್ಯ ಪ್ರೇರಕ ಶಕ್ತಿ ಆಗಿತ್ತು ಎಂದು ತಿಳಿಸುವುದು.

ಬಿ. ಎಂ. ಶ್ರೀ. ಅವರಲ್ಲಿ ಸಹಜವಾಗಿಯೇ ಸುಪ್ತವಾಗಿ ಅಡ ಗಿದ್ದ ಕನ್ನಡಮೊಲವು ಗುರುಗಳ ಪ್ರಭಾವದಿಂದಗಿ ಜಾಗೃತವಾಗಿತ್ತು. ಮದರಾಸಿಗೆ ಹೋಗಿದ್ದ ವೇಳೆಗಾಗಲೇ ಕನ್ನಡ ಭಾಷೆ ಸಾಹಿತ್ಯಗಳ ಬೆಳವಣಿಗೆ 19ನೆಯ ಶತಮಾನದ ಕಡೆಕಡೆಯಲ್ಲಿ ಕುಂಠಿತವಾಗಿ ಹೋಗಿದ್ದು, ಶೋಚನೀಯ ಸ್ಥಿತಿಯಲ್ಲಿದ್ದುದರ ಅರಿವಾಗಿತ್ತು. ಈ ಸಂದರ್ಭವನ್ನು ಪ್ರೊ| ಎ. ಎನ್. ಮೂರ್ತಿ ರಾಯರು ಚೆನ್ನಾಗಿ ಬಿಡಿಸಿ ಹೇಳಿದ್ದಾರೆ, "ಅವರು ಮದರಾಸಿನಲ್ಲಿದ್ದಾಗ ಕಾಣುತ್ತಿದ್ದ ಕನಸು, ನಿಜವಾಗಿ ಸಿವಿಲ್‌ಸರ್ವಿಸಿನದಲ್ಲ. ಅವರೂ ಅವರ ಮಿತ್ರರು ಕೆಲವರೂ ಸಂಜೆಯ ಹೊತ್ತು ಸಮುದ್ರ ತೀರದಲ್ಲಿ ಕುಳಿತು, ಕನ್ನಡ ಬಹು ಶೋಚನೀಯವಾದ ಸ್ಥಿತಿಗೆ ಇಳಿದಿದೆ. ಅದಕ್ಕೆ ನ್ಯಾಯವಾಗಿ ಸಲ್ಲಬೇಕಾದ ಸ್ಥಾನವನ್ನು ದೊರಕಿಸಿಕೊಳ್ಳಬೇಕು;

ಅವರ ಸಾಹಿತ್ಯಸಂಪತ್ತನ್ನು ಹೆಚ್ಚಿಸಬೇಕು; ಷೇಕ್ಸ್‌ಪಿಯರ್, ಪ್ಲೇಟೋ ಮುಂತಾದವರ ಕೃತಿಗಳನ್ನು ಕನ್ನಡಕ್ಕೆ ತರಬೇಕು. ಇತ್ಯಾದಿ ವಿಚಾರ ನಡಸುತ್ತಿದ್ದರಂತೆ. ಆಗ ಅವರ ಮನಸ್ಸಿನಲ್ಲಿ ಸುಳಿದಾಡುತ್ತಿದ್ದ ಯೋಚನೆಗಳು ಬಹುಬೇಗ ನಿಷ್ಕೃಷ್ಟವಾದ ರೂಪವನ್ನು ತಳೆದಿರಬೇಕು." (ಬಿ. ಎಂ. ಶ್ರೀಕಂಠಯ್ಯ, ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆ, 1975; ಪು. 4). ಮದರಾಸಿನಲ್ಲಿ ಇಂಗ್ಲಿಷ್ ಸಾಹಿತ್ಯವನ್ನು ಅಧ್ಯಯನವಿಷಯವಾಗಿ ಆರಿಸಿಕೊಂಡು ವ್ಯಾಸಂಗ ಮಾಡುತ್ತಿದ್ದ ಕಾಲದಲ್ಲೇ ಪ್ರಾಚೀನ ಕನ್ನಡ ಸಾಹಿತ್ಯದ ಪಕ್ಕದಲ್ಲಿ ಇಂಗ್ಲಿಷ್ ಸಾಹಿತ್ಯವನ್ನು ಇಟ್ಟು ಪರಸ್ಪರ ಹೋಲಿಸಿ, ಕನ್ನಡ ಸಾಹಿತ್ಯದ ಬಲಾಬಲಗಳನ್ನು ಪರೀಕ್ಷಿಸಿ ನೋಡುವ ಪ್ರವೃತ್ತಿ ಅವರಲ್ಲಿ ಬೆಳೆಯಿತೆಂದು ತೋರುತ್ತದೆ. 1909ರಲ್ಲಿ ಅವರು ಮಹಾರಾಜಾ ಕಾಲೇಜಿನಲ್ಲಿ ಅಧ್ಯಾಪಕರಾಗಿ ನೇಮಕಗೊಂಡರು. ಆಗ ಮೈಸೂರು ವಿಶ್ವವಿದ್ಯಾನಿಲಯ ಇನ್ನೂ ಸ್ಥಾಪನೆ ಆಗಿರಲಿಲ್ಲ. ಹಾಗಾಗಿ, ಅದು ಸರ್ಕಾರದ ನೇಮಕ. ಇಂಗ್ಲಿಷ್ ಮತ್ತು ಕನ್ನಡ, ಈ ಎರಡು ಭಾಷೆ ಸಾಹಿತ್ಯಗಳನ್ನೂ ಅವರು ಬೋಧಿಸಬೇಕಾಗಿತ್ತು. ಅಪೂರ್ವ ಹೊಣೆಗಾರಿಕೆಯನ್ನು ನಿರ್ವಹಿಸಬೇಕಾಗಿದ್ದ ಈ ಕಾಲದಲ್ಲಿ ಅವರು ಕನ್ನಡ ಮತ್ತು ಇಂಗ್ಲಿಷ್ ಕಾವ್ಯವನ್ನು ತೌಲನಿಕವಾಗಿ ಅಧ್ಯಯನ ಮಾಡಿ, ಅಧ್ಯಾಪನ ಮಾಡುವ ಅವಕಾಶ ತಾನಾಗಿ ಲಭಿಸಿತು. ಕಾವ್ಯದ ರೂಪ ಮತ್ತು ಕಾವ್ಯದ ವಸ್ತು, ಕನ್ನಡ ಕವಿತೆಯ ಈ ಎರಡು ಮುಖಗಳೂ ಸವೆದುಹೋಗಿ, ಅದು ಚಲಾವಣೆ ಇಲ್ಲದ ನಾಣ್ಯವಾಗಿ ಬೆಲೆಯನ್ನು ಕಳೆದುಕೊಂಡಿತ್ತು. ಅದಕ್ಕೆ ಹೊಸ ನೆಲೆಯನ್ನೂ ಬೆಲೆಯನ್ನೂ ಕಲ್ಪಿಸುವತ್ತ ಅವರ ಚಿಂತನ ಮೊದಲಾಯಿತು. ಕವಿತೆ ಮಾತ್ರವಲ್ಲದೆ ಕನ್ನಡ ಸಾಹಿತ್ಯದ ಸರ್ವತೋಮುಖವಾದ ಬೆಳವಣಿಗೆಯನ್ನು ಕುರಿತು ಮದರಾಸಿನಲ್ಲಿ ಓದಿಗೆಂದು ಹೋಗಿದ್ದ ಕಾಲದಲ್ಲಿ ಸುಳಿದ ಆಲೋಚನೆಗಳಿಗೆ ಒಂದು ಖಚಿತವಾದ ಆಕಾರವನ್ನು ಕೊಡುವ ಅವಕಾಶ ಅವರಿಗೆ ದೊರಕಿತು. 1911 ರಲ್ಲಿ

ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘ ಅವರನ್ನು ಉಪ ನ್ಯಾಸ ಕೊಡಲು ಆಹ್ವಾನಿಸಿತು. ಕನ್ನಡ ಮಾತು ತಲೆಯೆತ್ತುವ ಬಗೆಯನ್ನು ಕುರಿತು ಅವರು ತಮ್ಮ ಉಪನ್ಯಾಸದಲ್ಲಿ ವಿಶ್ಲೇಷಣೆ ಮಾಡಿದರು. ಕನ್ನಡ ಸಾಹಿತ್ಯದ ನವೋದಯ ಯುಗವನ್ನು ಪ್ರವರ್ತನಗೊಳಿಸಲು ಪೂರ್ವಪೀಠಿಕೆಯನ್ನು ಹಾಕಿಕೊಟ್ಟಿತು ಈ ಉಪನ್ಯಾಸ.

ಕನ್ನಡದ ಅಭಿವೃದ್ಧಿಗೆ ಸಲಹೆಸೂಚನೆಗಳನ್ನು ಕೊಡುವ ಮಾತನ್ನು ಅಂದಿನ ಪರಿಸ್ಥಿತಿಯಲ್ಲಿ – ಕನ್ನಡ ಮೂಲೆಗುಂಪಾಗಿ, ಕನ್ನಡದ ಬಗ್ಗೆ ಇಂಗ್ಲಿಷ್ ವಿದ್ಯೆ ಪಡೆದವರ ತಿರಸ್ಕಾರ ಪ್ರಬಲ ವಾಗಿ, ಇಂದಿನ ಹಾಗೆ ಅಂದೂ ಅಂಕಗಳ ಆಮಿಷಕ್ಕೆ ವಿದ್ಯಾರ್ಥಿ ಗಳು ಕನ್ನಡವನ್ನು ಬಿಟ್ಟು ಸಂಸ್ಕೃತವನ್ನೋ ಫ್ರೆಂಚನ್ನೋ ದ್ವಿತೀಯ ಭಾಷೆಯಾಗಿ ಆಯ್ದುಕೊಳ್ಳುತ್ತಿದ್ದ ಕಾಲದಲ್ಲಿ, ಕನ್ನಡದ ಸ್ಥಾನಮಾನವನ್ನು ಎತ್ತಿ ಹಿಡಿಯಲು ಕನ್ನಡಿಗರು ಯಾವ ಯಾವ ಭಾಷೆಗಳಿಂದ ಸಾರಗ್ರಹಣ ಮಾಡಬೇಕು ಎನ್ನುವುದನ್ನು ಚೆನ್ನಾಗಿ ವಿಚಾರಮಾಡಿ ತಮ್ಮ ನಿಲುವನ್ನು ಸ್ಪಷ್ಟವಾಗಿ ಮುಂದಿ ಟ್ಟರು. ಅವರು ಆಡಿದ ಕೆಲವು ಮಾತುಗಳು :

"ಸಾಮಾನ್ಯವಾದ ರಾಜ್ಯಕಾರ್ಯಕ್ಕೂ, ಇಂಡಿಯಾ ರಾಜ್ಯ ಕ್ಕೆಲ್ಲ ಸಂಬಂಧಪಟ್ಟ ವಿಷಯಗಳಿಗೂ, ಬೇರೆ ಬೇರೆ ಪ್ರಾಂತ ಗಳಿಂದ ಜನ ಕಲೆಯುತಕ್ಕ ಸಭೆಗಳಿಗೂ ಬಳಸುವುದಕ್ಕೆ ಇಂಗ್ಲಿಷ್ ಭಾಷೆಯನ್ನು ಇಟ್ಟುಕೊಳುವುದು; ಪ್ರಾಂತ್ಯಗಳಲ್ಲಿ ಹುಡುಗರು, ಹೆಂಗಸರು, ಒಕ್ಕಲಿಗರು ಎಲ್ಲರ ವಿದ್ಯಾಭಿವೃದ್ಧಿಗಾಗಿ ಆಯಾ ಜನರ ದೇಶಭಾಷೆಯನ್ನು ಇಟ್ಟುಕೊಳ್ಳುವುದು ; ಎರಡಲ್ಲ, ಇಪ್ಪತ್ತು ದೇಶ ಭಾಷೆಗಳಿದ್ದರೂ ಒಗ್ಗಟ್ಟಿಗೆ ಕುಂದುಕವಿಲ್ಲ ; ಎಲ್ಲಾ ಕಡೆಯಲ್ಲಿಯೂ ಆಡಬಹುದಾದ ಒಂದು ರಾಜ್ಯಭಾಷೆಯ ಜೊತೆಗೆ ಎಷ್ಟುಬೇಕಾದರೂ ಇರಬಹುದು. ಒಂದೇ ಏಕಭಾಷೆ ಯಿಲ್ಲದೆ ಏಕರಾಜ್ಯವಿಲ್ಲ ಎನ್ನುವ ಮಾತು ಸುಳ್ಳು... ಐಕಮತ್ಯ

ವೆಂದರೆ ಒಂದೇ ಪಡಿಯಚ್ಚಾಗಿ ಸ್ವತಂತ್ರವನ್ನು ನೀಗಿಕೊಳ್ಳ ಬೇಕೆಂದಲ್ಲ; ಭೇದವಿರಬೇಕಾದ ಕಡೆ ಭೇದವೂ ಸಾಮ್ಯವಿರಬೇಕಾದ ಕಡೆ ಸಾಮ್ಯವೂ ಮುಖ್ಯ. ಪರಸ್ಪರ ವಿಶ್ವಾಸವಿದ್ದಲ್ಲಿ ಎರಡೂ ಐಕಮತ್ಯದಲ್ಲಿ ಸೇರಬಹುದು. ಅದಕಾರಣ ಅಭಿಮಾನದಿಂದ ದೇಶಭಾಷೆಗಳನ್ನು ಉದ್ಧಾರಮಾಡಿ ಆಯಾ ಪ್ರಾಂತ್ಯಗಳ ಜನಸಾಮಾನ್ಯಕ್ಕೂ, **ಅನುಕೂಲಕ್ಕೆ** (ಒತ್ತು ನನ್ನದು ಎಂ. ವಿ. ಸೀ.). ಇಂಗ್ಲಿಷ್ ಭಾಷೆಯನ್ನು ಸ್ವೀಕರಿಸಿ ಒಗ್ಗಟ್ಟಿಗಾಗಿ ಒದ್ದಾಡುವ ಇಂಡಿಯಾದ ವಿದ್ಯಾವಂತರಿಗೂ, ಇಬ್ಬರಿಗೂ ಲಾಭವಾಗುವಂತೆ ನಡೆಯತಕ್ಕದ್ದೇ ಮೇಲು. ಈ ರೀತಿ ಈಗ ನಡೆಯುತ್ತಲೇ ಇದೆ. ಮುಂದೆಯೂ ಅದನ್ನೇ ಬಲಪಡಿಸಿಕೊಂಡು ಹೋಗುವುದು ಮೇಲೆಂದು ಕಾಣುತ್ತದೆ.

"ನಾವು ಸ್ವೀಕರಿಸತಕ್ಕ ಭಾಷೆಗಳನ್ನು ಹೇಳುತ್ತಿರುವಾಗ ಸಂಸ್ಕೃತವನ್ನು ಬಿಡುವುದಕ್ಕಿಲ್ಲ. ಇದು ನಮ್ಮ ಪೂರ್ವಿಕರಾದ ಆರ್ಯರ ಭಾಷೆ; ಇದರಲ್ಲೇ ನಮ್ಮ ಪುಸ್ತಕಭಂಡಾರವೆಲ್ಲಾ ಅಡಗಿದೆ. ಇದನ್ನು ತಿಳಿದ ಹೊರತು ಹಿಂದಿದ್ದ ಸ್ಥಿತಿಯಾಗಲಿ, ಈಗಿನ ಸ್ಥಿತಿಗೆ ಕಾರಣವಾಗಲಿ ತಿಳಿಯುವುದಿಲ್ಲ, **ಆದ್ದರಿಂದ ಇಂಡಿಯಾದಲ್ಲಿ ವಿದ್ಯಾವಂತನೆನ್ನುವ ಪ್ರತಿಯೊಬ್ಬನೂ ಇಂಗ್ಲಿಷ್, ಸಂಸ್ಕೃತ, ತನ್ನ ಕಡೆಯ ದೇಶಭಾಷೆ, ಈ ಮೂರನ್ನೂ ಚೆನ್ನಾಗಿ ತಿಳಿದಿರಬೇಕು.**"



ಇಲ್ಲಿ ಅವರು ಆಡಿದ ಮಾತು ಹೇಳಿಕೆಯ ಮಾತಲ್ಲ. ತಾವು ನಡೆದು ಅದರಂತೆ ನುಡಿದ ಮಾತು. ಶ್ರೇಷ್ಠವೆಂದು ಅಂಗೀಕೃತವಾದ ಹಳಗನ್ನಡ ಕಾವ್ಯಗಳು ಸಂಸ್ಕೃತಮಯವಾಗಿದ್ದುವು. ಸಂಸ್ಕೃತ ಕಾವ್ಯಮಾರ್ಗದಲ್ಲಿ ಸಂಸ್ಕೃತ ಕಾವ್ಯಗಳ ಪಡಿಯಚ್ಚಿನಲ್ಲಿ ರಚಿತವಾಗಿದ್ದುವು. ಅವುಗಳನ್ನು ಓದಿ ಅರ್ಥ ಮಾಡಿಕೊಳ್ಳಲು ತಕ್ಕ ಮಟ್ಟಿನ ಸಂಸ್ಕೃತ ಜ್ಞಾನ ಅಗತ್ಯ ಎಂಬ ಸತ್ಯವನ್ನು ಅವರು ಮನಗಂಡರು. ಸಂಸ್ಕೃತದ ಜ್ಞಾನಭಂಡಾರವನ್ನು ಕನ್ನಡದ ಬೊಕ್ಕಸಕ್ಕೆ ತುಂಬಿಕೊಳ್ಳಲು ಸಂಸ್ಕೃತಜ್ಞಾನ ಅಗತ್ಯ ಎಂದು

ಮನವರಿಕೆ ಮಾಡಿಕೊಂಡರು. ಶಾಲೆ ಕಾಲೇಜುಗಳಲ್ಲಿ ಸಂಸ್ಕೃತ ಕಲಿಯದಿದ್ದ ಅವರು ಸಂಸ್ಕೃತವನ್ನು ತಕ್ಕಮಟ್ಟಿಗೆ ಚೆನ್ನಾಗಿಯೇ ಕಲಿತರು. ಉಪನಿಷತ್ತುಗಳು, ರಾಮಾಯಣ, ಮಹಾಭಾರತ, ಕಾಳಿದಾಸನ ನಾಟಕಗಳು, ಇತ್ಯಾದಿ ಉದ್ಧ ಸಂಸ್ಕೃತ ಕೃತಿಗಳನ್ನು ಮೂಲದಲ್ಲಿಯೇ ಓದಿ ಅರ್ಥಮಾಡಿಕೊಳ್ಳುವ ಮಟ್ಟಿಗೆ ಆ ಭಾಷೆ ಯಲ್ಲಿ ಪಾಂಡಿತ್ಯ ಪಡೆದರು. ಸಂಸ್ಕೃತವನ್ನು ಇತರರ ಸಹಾಯ ದಿಂದ ಕಲಿತರೇ ಇಲ್ಲವೆ ಸ್ವಂತ ಕೃಷಿಯಿಂದ ಕಲಿತರೇ, ಹೇಗೆ ಎಂದು ಹೇಳುವುದಕ್ಕೆ ದಾಖಲೆ ಇಲ್ಲ. ಉನ್ನತ ಮಟ್ಟದಲ್ಲಿ ಕನ್ನಡ ವನ್ನು ವ್ಯಾಸಂಗ ಮಾಡುವವರಿಗೆ ಸಂಸ್ಕೃತಜ್ಞಾನ ಅತ್ಯಗತ್ಯ ಎಂದು ಕಂಡುಕೊಂಡ ಅವರು,ಮುಂದೆ ತಾವು ರಿಜಿಸ್ಟ್ರಾರ್ ಆಗಿದ್ದ ಕಾಲದಲ್ಲಿ ವ್ಯವಸ್ಥೆ ಮಾಡಿದ ಕನ್ನಡ ಎಂ. ಎ. ಪದವೀ ಪರೀಕ್ಷೆಗೆ ಸಂಸ್ಕೃತದ ಕಲಿಕೆಯನ್ನು ಕಡ್ಡಾಯ ಮಾಡಿದರು. ಈ ಹಿನ್ನೆಲೆಯಲ್ಲಿ ನೋಡಿದಾಗ ಅವರು ಸಂಸ್ಕೃತದ ಬಗ್ಗೆ ಅಪಾರ ಅಭಿಮಾನವುಳ್ಳವರಾಗಿದ್ದು ಕನ್ನಡದ ಪುರೋಭಿವೃದ್ಧಿಗೆ ಸಂಸ್ಕೃತದ ಕಲಿಕೆ ಅಗತ್ಯ ಎಂದು ನಂಬಿದ್ದರು. ಎನ್ನುವುದು ಸ್ಪಷ್ಟವಾಗಿದೆ. ಅವರು ಸಂಸ್ಕೃತ ದ್ವೇಷಿಗಳು ಎಂಬ ಅಪಪ್ರಥೆಯನ್ನು ಅವರ ಹೇಳಿಕೆಗಳ ಹಿಂದುಮುಂದುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಸಂಸ್ಕೃತ ಪ್ರೇಮಿಗಳು ಅವರ ಮೇಲೆ ಅನ್ಯಾಯವಾಗಿ ಹೊರಿಸಿದರು. ಸಂಸ್ಕೃತದಿಂದ ಕನ್ನಡಕ್ಕೆ ಎಷ್ಟು ಉಪಕಾರವಾಗಿದೆಯೋ ಅಷ್ಟೇ ಅಪಕಾರವೂ ಆಗಿದೆ ಎಂದು ಧೈರ್ಯ ವಾಗಿ ಘೋಷಿಸುತ್ತಿದ್ದುದು ಸಂಸ್ಕೃತ ಪ್ರೇಮಿಗಳನ್ನು ಕೆರಳಿಸಿತ್ತು. ಮೈಸೂರು ವಿಶ್ವವಿದ್ಯಾನಿಲಯದ ಶಿಕ್ಷಣ ಕ್ರಮದಲ್ಲಿ ದ್ವಿತೀಯ ಭಾಷೆಯ ಸ್ಥಾನದಲ್ಲಿ ಸಂಸ್ಕೃತ ಕನ್ನಡದೊಂದಿಗೆ ಐಚ್ಛಿಕವಾಗಿ ದ್ದುದರಿಂದ ಕನ್ನಡದ ಸ್ಥಾನಮಾನಕ್ಕೆ ಧಕ್ಕೆಯುಂಟಾಗಿದೆ ಎಂದು ಸೆನೆಟ್ ಸಭೆಯಲ್ಲಿ ಹೋರಾಟ ನಡಸಿದ್ದರು. ಆ ಸಮಸ್ಯೆ ಇಂದಿಗೂ ಪರಿಹಾರವಾಗದೆ ಉಳಿದಿದೆ. ಕನ್ನಡಕ್ಕೆ ಯಾವ ಕಡೆಯಿಂದ ಅನ್ಯಾಯ ವಾಗುತ್ತಿದ್ದರೂ ಆ ಕಡೆ ಮುಂಚೂಣಿಯಲ್ಲಿ ನಿಂತು ಹೋರಾಡಲು

ಅವರು ಸದಾ ಸಿದ್ಧರಾಗಿದ್ದರು. "ಕನ್ನಡ ನನಗೆ ಮುಂದು, ಉಳಿದುದು ಏನಿದ್ದರೂ ಅದರ ಹಿಂದು. ಕನ್ನಡದ ಕಾವಲುನಾಯಿ ನಾನು ; ಅದಕ್ಕೆ ಕಾವು ತಟ್ಟುವುದಾದರೆ ನಾನು ಬಗುಳುವುದುಂಟು ; ಕಚ್ಚುವ ನಾಯಲ್ಲ" ಎಂದು ಕನ್ನಡದ ವಿರೋಧ ಶಕ್ತಿಗಳಿಗೆ ಎಚ್ಚರಿಕೆ ನೀಡಿದರು. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಹೆಸರಿನಲ್ಲಿ ಕರ್ಣಾಟಕದ 'ಣ' ಕಾರವನ್ನು 'ನ' ಕಾರವಾಗಿ ಅವರು ಮಾರ್ಪಡಿಸಿದಾಗ ಪ್ರಬಲವಾದ ಆಕ್ಷೇಪ ಎತ್ತಿದ ತಮ್ಮ ಗುರುಗಳಾದ ಬೆಳ್ಳಾವೆಯವರೊಂದಿಗೆ ಸಾರ್ವಜನಿಕ ವಾಗ್ಯುದ್ಧಕ್ಕೆ ನಿಂತರು. ಪರಿಷತ್ತಿನ ಹೆಸರುಹಲಗೆಯ ನಿಯಾನ್ ಬೆಳಕಿನ ಅಕ್ಷರ ವಿನ್ಯಾಸದ ಅನುಕೂಲಕ್ಕಾಗಿ ಹಾಗೆ 'ಣ' ಕಾರವನ್ನು 'ನ' ಕಾರವಾಗಿ ಮಾರ್ಪಾಟು ಮಾಡಲಾಯಿತು ಎಂದು ಪ್ರೊ|| ಎ.ಎನ್.ಮೂರ್ತಿರಾಯರರು ತಮ್ಮ ಪುಸ್ತಕದಲ್ಲಿ ಬರೆದಿದ್ದಾರೆ. ನಿಯಾನ್ ಬೆಳಕಿನ ಬೋರ್ಡು ಹಾಕಿದಾಗ ಮಾರ್ಪಾಟು ಎಲ್ಲರ ಗಮನಕ್ಕೂ ಬರುವ ಹಾಗಾಗಿ, ಬೆಳ್ಳಾವೆಯವರೂ ಗಮನಿಸಿದರು. ಅದಕ್ಕೂ ಹಿಂದೆಯೇ, ಪರಿಷತ್ಪತ್ರಿಕೆಯ ಹೆಸರಿನಲ್ಲೇ ಆ ಬದಲಾವಣೆ ಆಗಿತ್ತು. ಈ ಬದಲಾವಣೆಯ ಹಿಂದೆ ಒಂದು ಚರಿತ್ರೆ ಅಡಗಿದೆ. ಅದನ್ನು ಇಲ್ಲಿ ಪ್ರಸ್ತಾವಿಸುವುದಿಲ್ಲ. 'ಕರ್ಣಾಟಕ' ಶಬ್ದರೂಪಕ್ಕಿಂತ 'ಕರ್ನಾಟಕ' ಶಬ್ದರೂಪವೇ ಸಾಧು ಎಂಬುದು ಭಾಷಾಶಾಸ್ತ್ರಜ್ಞರಾದ ಬಿ.ಎಂ.ಶ್ರೀ ಅವರ ನಿಶ್ಚಿತ. ವಾಗ್ಯುದ್ಧದ ಹಿನ್ನೆಲೆಯಲ್ಲಿ ಸಂಸ್ಕೃತಪರವಾದ ವ್ಯುತ್ಪತ್ತಿ ಕನ್ನಡ ಪರವಾದ ವ್ಯುತ್ಪತ್ತಿ (ಕರ್ + ನಾಟ್ + ಅಗಂ: ಕಪ್ಪು ಮಣ್ಣಿನ ನಾಡಿನ ಒಳಭಾಗ) ಇವೆರಡರ ನಡುವಣ ತಾಕಲಾಟ ಅಡಗಿದೆ. "ಕೊನೆಗೆ ಉಳಿಯುವುದು ಅಭಿಮಾನವಲ್ಲ, ಸತ್ಯ" ಎಂಬ ಅವರ ನಂಬಿಕೆ ಅವರು ತೀರಿಕೊಂಡಮೇಲೆ, ಮೈಸೂರು ರಾಜ್ಯಕ್ಕೆ 'ಕರ್ನಾಟಕ' ಎಂದು ನಾಮಕರಣವಾದಾಗ ಸಾಬೀತಾಯಿತು.

ಸಂಸ್ಕೃತದಂತೆ, ಇಂಗ್ಲಿಷಿನ ಬಗ್ಗೆಯೂ ಅವರ ನಿಲುವು ಖಚಿತ. ಇಂಗ್ಲಿಷ್ ಪ್ರಾಧ್ಯಾಪಕರಾಗಿ ಇಂಗ್ಲಿಷ್ ಕಾವ್ಯದ,

ನಾಟಕದ; ಇತರ ಸಾಹಿತ್ಯ ಪ್ರಕಾರಗಳ, ಸೊಬಗನ್ನು ಅವರು ಸವಿದಿದ್ದರು. ಈ ಪ್ರಕಾರಗಳೆಲ್ಲವೂ ಕನ್ನಡಕ್ಕೆ ಆವುದಾಗಿ ಬರಬೇಕೆಂದು ಅವರ ಹೆಬ್ಬಯಕೆ. "ಇಂಗ್ಲಿಷ್ ಸಾಹಿತ್ಯವೇ ಜೀರ್ಣವಾದ ನಮ್ಮ ಕಾವ್ಯಮಾಲೆಯನ್ನು ಕೈಕೊಟ್ಟು ಎತ್ತಬೇಕು. ಇಂಗ್ಲಿಷ್ ಸಾಹಿತ್ಯವೇ ಸಂಸ್ಕೃತ ಸಾಹಿತ್ಯದಿಂದ ನಮ್ಮ ಕಾವ್ಯಮಾಲೆಗೆ ಇಳಿದಿರುವ ದೋಷಗಳನ್ನು ಪರಿಹಾರ ಮಾಡಬೇಕು" ಎಂದು ಸಲಹೆ ಮಾಡಿದರು. "ಕಾವ್ಯಕ್ಷೇತ್ರದಲ್ಲಿ ಕನ್ನಡ ಕಾವ್ಯವನ್ನು ಕೈಕೊಟ್ಟು ಎತ್ತಿ" ಬಿ. ಎಂ. ಶ್ರೀ ಅವರೇ ಮೇಲುಪಂಕ್ತಿ ಹಾಕಿದರು ; "ಅವಳ ತೊಡಿಗೆ ಇವಳಿಗಿಟ್ಟು ಹಾಡ" ಬಯಸಿದರು. ಫಲ : "ಇಂಗ್ಲಿಷ್ ಗೀತೆಗಳು." ನವೋದಯ ಕಾವ್ಯದ ಪ್ರವರ್ತಕರಾದರು .ಬಿ ಎಂ. ಶ್ರೀ. ಅವರು ನೆಟ್ಟ ಮರ ಇನ್ನೂ ಫಲಕೊಡುತ್ತಲೇ ಇದೆ. "ಪಡುವ ಕಡಲ ಹೊನ್ನ ಹೆಣ್ಣು – ನನ್ನ ಜೀವದುಸಿರು ಕಣ್ಣು" ಎಂದು ಸಾರಿದರೂ, "ಜನ ಸಾಮಾನ್ಯಕ್ಕೆ ಕನ್ನಡನಾಡಿಗೆ ಕನ್ನಡವೇ ಗತಿ, ಅನ್ಯಥಾ ಶರಣಂ ನಾಸ್ತಿ. ಸಂಸ್ಕೃತವಲ್ಲ, ಇಂಗ್ಲಿಷಲ್ಲ, ಹಿಂದಿಯಲ್ಲ; ಕನ್ನಡ" ಎಂಬ ಕನ್ನಡಿಗರ ತಾರಕಮಂತ್ರವನ್ನು ಉಪದೇಶಿಸಿದರು.

ಹೀಗೆ ಯಾವ ಮಗ್ಗುಲಿನಿಂದ ನೋಡಿದರೂ ಕನ್ನಡದ ಬಾವುಟವನ್ನು ಎತ್ತಿ ಹಿಡಿದು ವಿರುದ್ಧ ಶಕ್ತಿಗಳ ಎದುರು ಹೋರಾಟಕ್ಕೆ ನುಗ್ಗಿದ, ಕನ್ನಡ ಚಳವಳಿಯ ಪ್ರಥಮ ನೇತಾರರಾಗಿ ಕಂಗೊಳಿಸುತ್ತಾರೆ ಬಿ. ಎಂ. ಶ್ರೀ.

ಬಿ. ಎಂ. ಶ್ರೀ ಅವರ ಕನ್ನಡ ಪರವಾದ ಹೋರಾಟ ಕೇವಲ ನೇತ್ಯಾತ್ಮಕವಾಗಿರಲಿಲ್ಲ: ಇತ್ಯಾತ್ಮಕವಾಗಿಯೂ ಇತ್ತು. ಕನ್ನಡದ ಸರ್ವಾಂಗೀಣ ಪ್ರಗತಿಗೆ ಅವರು ಕನ್ನಡಿಗರ ಮುಂದೆ ಅಂದು ಮಂಡಿಸಿದ ಕಾರ್ಯಕ್ರಮಪ್ರಣಾಳಿಕೆ ಇಂದಿಗೂ ಅನುಸರಣ ಯೋಗ್ಯವಾಗಿ ಉಳಿದುಬಂದಿದೆ. ಅವರ ಕನ್ನಡೋದ್ಧಾರ ಸೂತ್ರಗಳನ್ನು ಹೀಗೆ ಸಂಗ್ರಹಿಸಬಹುದು:

1. ನಮ್ಮ ಪೂರ್ವ ಸಾಹಿತ್ಯ ಭಂಡಾರವನ್ನು

ಕೂಡಿಟ್ಟು ಕಾಪಾಡಿಕೊಂಡು ಹೆಚ್ಚಿಸುತ್ತ ಹೋಗಬೇಕು (ಇದರಲ್ಲಿ ಕಾವ್ಯಗಳೂ ಶಾಸ್ತ್ರಗ್ರಂಥಗಳೂ ಸೇರಿರುತ್ತವೆ.)

2. ಹೀಗೆ ಕಾಪಾಡಿಕೊಳ್ಳುವ ಸಂದರ್ಭದಲ್ಲಿ ಗುಣದೋಷ ವಿಮರ್ಶೆ ಮಾಡಿ, ಗುಣಭಾಗವನ್ನು ಉಳಿಸಿಕೊಂಡು ದೋಷಭಾಗವನ್ನು ಕೈಬಿಡಬೇಕು.

3. "ಪೂರ್ವವನ್ನು ಅಳಿಸಿಬಿಟ್ಟು ಭವಿಷ್ಯಕ್ಕೆ ಹಾರುವುದಕ್ಕೆ ಆಗಲಾರದು." ಆದ್ದರಿಂದ ಪೂರ್ವ ಕಾವ್ಯಗಳ ವಿಷಯದಲ್ಲಿ :

(ಅ) "ದೇಶದಲ್ಲಿ ಹುಳುತಿಂದುಹೋಗದೆ ಉಳಿದಿರುವ ಗ್ರಂಥಗಳನ್ನೆಲ್ಲಾ ಶೇಖರಿಸಿ ಒಂದನ್ನೂ ಬಿಡದಂತೆ ಅಚ್ಚುಹಾಕಬೇಕು." ಈ ಲಕ್ಷ್ಯ ಗ್ರಂಥಗಳನ್ನು ಅನುಸರಿಸಿ ಕಾಲಕ್ಕೆ ತಕ್ಕಂತೆ ಭಾಷೆಯ ಚರಿತ್ರೆ, ಹಳ ಹೊಸಗನ್ನಡ ವ್ಯಾಕರಣ, ನಿಘಂಟು, ರಸ, ಅಲಂಕಾರ, ಕಾವ್ಯ ಸ್ವರೂಪ, ಕಾವ್ಯ ವಿಮರ್ಶೆ, ಛಂದಸ್ಸು, ಕಾವ್ಯಮಾಲೆಯ ಚರಿತ್ರೆ ಇವುಗಳನ್ನು ರಚಿಸುವುದು."

(ಆ) ಬಾಲಶಿಕ್ಷೆಗಾಗಿ ಪೂರ್ವ ಕಾವ್ಯಗಳ ಉತ್ತಮ ಭಾಗಗಳನ್ನು ಆಯ್ಕೆ ಮಾಡಿ ಉಪಯೋಗಿಸುವುದು. (ಈ ಕೆಲಸದಿಂದ ಆಗುವ ಸತ್ಪರಿಣಾಮಗಳನ್ನು ಬಿ. ಎಂ. ಶ್ರೀ. ವಿವರಿಸಿದ್ದಾರೆ. ಮುಖ್ಯವಾಗಿ ಹಳಗನ್ನಡದ ಪರಿಚಯ ಆಗುತ್ತದೆ ; ಪೂರ್ವ ಪರಂಪರೆಯ ನೆನಪು ಉಳಿದುಬರುತ್ತದೆ.)

(ಇ) ಮುಂಪಕ್ಕೆ ಉತ್ತಮ ಕಾವ್ಯಗಳು ಸಾಧ್ಯವಾಗುವಂತೆ ಉಳುಮೆ ಮಾಡಬೇಕು. ಈ ಕೆಲಸ ಮಾಡುವಾಗ, ನಮ್ಮವರು ಹೆಮ್ಮೆಪಡಬಹುದಾದಂತಹ ಕೃತಿರಚನೆ ಮಾಡುವವರು ನೆನಪಿನಲ್ಲಿಡಬೇಕಾದ ಅಂಶಗಳು : (1) ಭಾಷೆಯ ವಿಷಯದಲ್ಲಿ, ಹೊಸಗನ್ನಡವನ್ನೇ ಬಳಸಬೇಕು. ಬಳಕೆಯಲ್ಲಿರುವ ಸಂಸ್ಕೃತ ಪದಗಳಲ್ಲದೆ ಪುಸ್ತಕದ ಸಂಸ್ಕೃತ, ತದ್ಭವ ಕೂಡದು. ಗ್ರಾಮ್ಯ ಭಾಷೆ ಕೂಡದು. ಮೇಲುವರ್ಗದ ಜನ ಬಳಸುವ ಭಾಷೆಯನ್ನು ಉಪಯೋಗಿಸುತ್ತ ಬಂದರೆ "ಅದೇ ನೆಲೆಯಾಗಿ ನಿಂತು ಎತ್ತಲೂ ಹರಡುತ್ತದೆ."

ರೂಢಿಗೆ ಬಂದ ಅನ್ಯ "ದೇಶ್ಯ ಶಬ್ದಗಳನ್ನು ವಿಶೇಷವಾಗಿ ಸೇರಿಸ ಬಾರದು. ಶಬ್ದಗಳ ಕಲ್ಪನೆಯೂ ಕೂಡದು;" ರೂಢಿಯಲ್ಲಿರುವ ಶಬ್ದಗಳನ್ನು ಬಳಸಬೇಕು; "ರೈಲನ್ನು ರೈಲೆಂದೇ ಕರೆಯುವುದು ಉತ್ತಮ, ಹೊಗೆಬಂಡಿ ಹೊಗೆಗಾಡಿ ಎನ್ನುವುದು ಮಧ್ಯಮ; ಧೂಮಶಕಟ ಎನ್ನುವುದು ಅಧಮ." "ಕಠಿನ ಪದಗಳಲ್ಲಿ ಕೈವಲ್ಯ ಉಂಟು" ಎಂದು ಮೋಸಹೋಗಬಾರದು. (ಕನ್ನಡವನ್ನು ಆಡಳಿತ ಭಾಷೆಯಾಗಿ ಮಾಡುವ ಉತ್ಸಾಹದ ಈ ದಿನಗಳಲ್ಲಿ ಬಿ.ಎಂ.ಶ್ರೀ ಯವರ ಈ ನಿರ್ದೇಶನವನ್ನು ಚಾಚು ತಪ್ಪದೆ ಪಾಲಿಸಬೇಕು.) ಭಾಷೆಯನ್ನು ಹೀಗೆ ಪೋಷಿಸುವುದರಿಂದ ಹೊಸ ಹೊಸ ವಿಚಾರ ಗಳನ್ನು ಎಲ್ಲ ವರ್ಗದ ಜನಕ್ಕೂ ಏಕಕಾಲದಲ್ಲಿ ಹರಡುವುದಕ್ಕೆ ಸಹಾಯವಾಗುತ್ತದೆ. (2) ಗ್ರಂಥ ವಿಷಯ ಪ್ರಯೋಜಕವಾಗಿದ್ದು ಸಮಾಜದ ಏಳಿಗೆಗೆ ನೆರವಾಗುವಂತೆ ಇರಬೇಕು. ಧರ್ಮ ವಿಚಾರದಲ್ಲಿ ಬುದ್ಧಿಯನ್ನು ಕುದುರಿಸಿ ಮೂರ್ಖತನವನ್ನು, ಮೂಢಭಕ್ತಿಯನ್ನು ಕಿತ್ತುಹಾಕುವ ಪ್ರಕೃತಿ ಶಾಸ್ತ್ರಗಳನ್ನು ಸಂಸ್ಕೃತದಿಂದಲೂ ಇಂಗ್ಲಿಷಿನಿಂದಲೂ ಗ್ರಹಿಸಿದ ವಿದ್ವಾಂಸರು ಮಿಕ್ಕವರಿಗೆ ಅವರು ಆಡುವ ಮಾತಿನಲ್ಲಿ ತಿಳಿಸತಕ್ಕದ್ದು. (3) ಲಾಭವೇ ಗ್ರಂಥದ ಗುರಿಯಾಗಿರದೆ ಹರ್ಷವೂ ಆಗಿರುವುದ ರಿಂದ ವಿನೋದವಾಗಿ ಕಾಲ ಕಳೆಯುವುದಕ್ಕಾಗಿ ಕಟ್ಟುಕಥೆಗಳನ್ನೂ ಕಾದಂಬರಿಗಳನ್ನೂ ಸರಸ ಪ್ರಸಂಗಗಳನ್ನೂ ಬರೆಯಬೇಕು. (4) ಉಳಿದು ಬಂದಿರುವ ಪೂರ್ವದ ಹಿರಿಯರ ಜೀವನ ಚರಿತ್ರೆಗಳನ್ನು ಸತ್ಯದ ದೃಷ್ಟಿಯಿಂದ ಸರಿಪಡಿಸಿ ಬರೆಯಿಸಿದರೆ "ಹುಡುಗರಲ್ಲಿ ಹುರುಡೂ ಜನರಲ್ಲಿ ಸ್ವದೇಶಪ್ರೇಮವೂ ಆತ್ಮಗೌರವವೂ ಪೋಕೆ ಹಾಕುತ್ತವೆ." (5) "ಹಿಂದೆ ಸಂಸ್ಕೃತದ ಪೋಷಣೆಯಿಂದ ಕಾವ್ಯ ಮಾಲೆಯನ್ನು ಬೆಳಸಿದಂತೆ ಗ್ರೀಕ್, ಲ್ಯಾಟಿನ್, ಜರ್ಮನ್, ಫ್ರೆಂಚ್ ಸಂಸ್ಕೃತ ಮುಂತಾದ ಭಾಷೆಗಳಿಂದ ಸಾರವನ್ನು ಹೀರಿ ಪುಷ್ಟಿ ಯಾಗಿರುವ ಇಂಗ್ಲಿಷಿನ ಐಶ್ವರ್ಯದಲ್ಲಿ ಭಾಗಿಗಳಾಗಿ ಭಾಷಾಂತರ ಗಳಿಂದ ಕನ್ನಡದ ಬೊಕ್ಕಸವನ್ನು ತುಂಬಿದರೆ ಸ್ವದೇಶಮಾರ್ಗವೂ

ವಿದೇಶವಮಾರ್ಗವೂ ಕಲೆತು ಒಂದಾಗಿ ಅತ್ಯುತ್ತಮವಾದ ಕಾವ್ಯ ಮಾಲೆ ನಮ್ಮಲ್ಲೂ ನೆಲೆ ನಿಲ್ಲುವುದು". (6) "ಸಂಸ್ಕೃತ ಪಂಡಿತರು ಧಾರಾಳವಾಗಿ ಕನ್ನಡಿಗರನ್ನು ಉದ್ಧಾರ ಮಾಡಬಹುದು. ರಾಮಾಯಣ, ಭಾರತ, ಭಾಗವತ ಮುಂತಾದ ವಿಷಯಗಳಲ್ಲಿ ಮೈಸೂರಿನ ಅರಸರು ಮಾಡಿದಂತೆ, ನಿಸ್ಸಾರವಾದ ಕಾವ್ಯ ನಾಟಕಗಳ ಭಾಷಾಂತರವನ್ನು ಬಿಟ್ಟು", "ಅಮೂಲ್ಯವಾದ ಶ್ರುತಿ ಸ್ಮೃತಿ ಉಪನಿಷತ್ತು ಪುರಾಣಗಳನ್ನೂ ಆಚಾರ್ಯರ ಭಾಷ್ಯಗಳನ್ನೂ ಅನ್ಯ ಮತತತ್ತ್ವಗಳನ್ನೂ ನಿಷ್ಪಕ್ಷಪಾತವಾಗಿ ಭಾಷಾಂತರ ಮಾಡಿ ಕೊಟ್ಟರೆ ಜನಗಳ ಜ್ಞಾನೋದಯವೇ ಅಲ್ಲದೆ ಕನ್ನಡ ಕಾವ್ಯ ಮಾಲೆಯೂ ಸಮೃದ್ಧಿಯಾಗುತ್ತದೆ. ಪ್ರಕೃತದಲ್ಲಿ ನಮ್ಮ ದೇಶಕ್ಕೆ ಇದಕ್ಕಿಂತ ಶ್ರೇಷ್ಠವಾದ ಉಪಕಾರ ನನಗೆ ತೋರುವುದಿಲ್ಲ".

ಬಿ. ಎಂ. ಶ್ರೀಯವರು ತಮ್ಮ ಇತರ ಲೇಖನ, ಭಾಷಣ, ಟಿಪ್ಪಣಿಗಳಲ್ಲೂ ಕನ್ನಡದ ಮುಂದಿನ ಏಳಿಗೆಯೊಂದನ್ನೇ ಗಮನದಲ್ಲಿ ಇಟ್ಟುಕೊಂಡು, ಬದುಕಿದ್ದಷ್ಟು ಕಾಲವೂ ಕನ್ನಡದ, ಕನ್ನಡಿಗರ ಒಳಿತಿಗಾಗಿ ಹಂಬಲಿಸಿ ಹಾರೈಸಿ ಹಾತೊರೆದು, ತಮ್ಮ ಚಿಂತನಗಳನ್ನೂ ನಿಶ್ಚಿತಗಳನ್ನೂ ಅತ್ಯಂತ ಸಾರವತ್ತಾದ ರೀತಿಯಲ್ಲಿ ತಿಳಿಯ ಹೇಳಿದರು. "ಕನ್ನಡಕ್ಕೆ ಒಂದು ಕಟ್ಟು" ಎಂಬ ಅವರ ಲೇಖನದಲ್ಲಿ, ಕನ್ನಡ, ಶಬ್ದಕೋಶವನ್ನು ಹೇಗೆ ಬಳಸಬೇಕು ಬೆಳಸಬೇಕು ಉಳಿಸಿಕೊಳ್ಳಬೇಕು ಎಂಬ ಬಗೆಗೂ, ಕಾಲೋಚಿತವಾಗಿ ಸರಿಯಾಗಿ ಅರ್ಥಮಾಡಿಕೊಂಡು ವ್ಯಾಕರಣ ನಿಯಮಗಳನ್ನು ಗ್ರಂಥಕರ್ತರು, ಬರಹಗಾರರು, ಪಾಲಿಸಬೇಕಾದ ಅಗತ್ಯದ ಬಗೆಗೂ ಸಾರವತ್ತಾಗಿ ತಿಳಿಸಿದ್ದಾರೆ.



1911ರಲ್ಲಿ ಮಾಡಿದ "ಕನ್ನಡ ಮಾತು ತಲೆಯೆತ್ತುವ ಬಗೆ" ಭಾಷಣದಂತೆ 1982ರಲ್ಲಿ ಕಲ್ಬುರ್ಗಿಯಲ್ಲಿ ನಡೆದ ಸಾಹಿತ್ಯಸಮ್ಮೇಳನದ ಅಧ್ಯಕ್ಷರಾಗಿ ಮಾಡಿದ "ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ" ಎಂಬ ಭಾಷಣವೂ ಐತಿಹಾಸಿಕವಾಗಿ ಮಹತ್ವಪೂರ್ಣವಾದ ಭಾಷಣ. ನಮ್ಮ ಪೂರ್ವ ಸಾಹಿತ್ಯದಲ್ಲಿ ಸಾರವತ್ತಾದ ಭಾಗವನ್ನು ಉಳಿಸಿ

ಕೊಂಡು ಇತರ ದೇಶಗಳ ಶ್ರೇಷ್ಠ ಸಾಹಿತ್ಯದಿಂದ ಸಾರವನ್ನು ಹೀರಿ ಹೊಸ ಕಾಲಕ್ಕೆ ಒಪ್ಪಿಯು ಹೊಸ ಸಾಹಿತ್ಯವನ್ನು ಸೃಷ್ಟಿ ಮಾಡುವ ಕಡೆಗೆ ಗಮನ ಹರಿಸಬೇಕೆಂಬುದು ಈ ಸ್ಫೂರ್ತಿ ದಾಯಕ ಭಾಷಣದ ಪಲ್ಲವಿ. ಈ ಹೊಸ ಸಾಹಿತ್ಯ "ವಿಲಾಸವತಿಯ ಕೊರಳಿನ ಪುಷ್ಪಮಾಲಿಕೆಯೇ ಅಲ್ಲ .......... ಮಾನವ ಜೀವನದ ಪುನರ್ನಿರ್ಮಾಣ ಕಾರ್ಯದಲ್ಲಿ ಬದ್ಧಕಂಕಣರಾಗಿರುವ ವೀರರ ಕೈಯ ಖಡ್ಗವೂ ಅಹುದು" ಎಂಬ ಆದರ್ಶವನ್ನು ನಮ್ಮ ಮುಂದಿಟ್ಟರು.

ಅವರು ತಮ್ಮ ಬರಹ ಭಾಷಣಗಳಿಂದ ಸಾಧಿಸಿದ ಒಂದು ಮಹತ್ವದ ಸಾಧನೆ ಎಂದರೆ, - ಕಾಲ್ಡ್ವೆಲ್ ಕಿಟೆಲ್ ಇವರ ಬರಹ ಗಳನ್ನು ಅಧ್ಯಯನ ಮಾಡಿ ತಮಿಳನ್ನು ಕಲಿತು, ಸಂಸ್ಕೃತ ಪಂಡಿತರು ಭಾವಿಸಿದ್ದಂತೆ ಕನ್ನಡ ಸಂಸ್ಕೃತಜನ್ಯವೂ ಅಲ್ಲ, ತಮಿಳು ಜನ ಹೇಳುತಿದ್ದಂತೆ ಕನ್ನಡ ತಮಿಳಿನ ಕವಲುಭಾಷೆಯೂ ಅಲ್ಲ, ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಸ್ವತಂತ್ರವಾದ ಭಾಷೆ; ತಮಿಳಿಗಿಂತಲೂ ಪ್ರಾಚೀನವಾದ ಕೆಲವು ಶಬ್ದರೂಪಗಳನ್ನು ಉಳಿಸಿ ಕೊಂಡಿದೆ - ಎಂಬ ಯಥಾರ್ಥ ಸಂಗತಿಯನ್ನು ವಿದ್ವಾಂಸರ ಗಮನಕ್ಕೆ ತಂದದ್ದು.

ಬಿ. ಎಂ. ಶ್ರೀಯವರು ಸಾಹಿತ್ಯ ಕೃಷಿಯ ಹಾದಿಯಲ್ಲಿ ಕೆಲವು ಮಾರ್ಗದರ್ಶಕ ಕೃತಿಗಳನ್ನು ರಚಿಸಿ, ಮೇಲುಪಂಕ್ತಿ ಹಾಕಿ ದರು. ಭಾರತೀಯ ಸಾಹಿತ್ಯದಲ್ಲಿ ರುದ್ರನಾಟಕದ ಕಲ್ಪನೆಯೇ ಇಲ್ಲ. ಪಂಪರಾಮಾಯಣದ ರಾವಣ, ರನ್ನನ ಗದಾಯುದ್ಧದ ದುರ್ಯೋಧನ ಇವರಲ್ಲಿ ರುದ್ರನಾಯಕನ ಗುಣಲಕ್ಷಣ ಇರುವು ದನ್ನು ಮೊತ್ತಮೊದಲಿಗೆ ಗುರುತಿಸಿದರು. "ದುರಂತ ರಾವಣ" (Tragic Ravana) ಎಂಬ ಲೇಖನವನ್ನು ಬರೆದು, ರನ್ನನ ಗದಾಯುದ್ಧ ನಾಟಕವನ್ನು ರಚಿಸಿದರು. ಗ್ರೀಕ್ ರುದ್ರನಾಟಕದ ಮಹತ್ವವನ್ನು ಮನಗಂಡು, ಸಾಫೋಕ್ಲೆಸನ (ಅಜಾಕ್ಸ್) ನಾಟಕ ವನ್ನು ಆಧರಿಸಿ, ಬಹುಮಟ್ಟಿಗೆ ಸ್ವತಂತ್ರ ಎನ್ನಬಹುದಾದ

'ಅಶ್ವತ್ಥಾಮನ್' ನಾಟಕರತ್ನವನ್ನು ಕನ್ನಡ ನಾಟಕಭಂಡಾರಕ್ಕೆ ಅರ್ಪಿಸಿದರು. ಈ ಎರಡೂ ನಾಟಕಗಳು ರಂಗಭೂಮಿಯ ಮೇಲೆ ಅನೇಕ ಸಲ ಯಶಸ್ವಿಯಾಗಿ ಪ್ರದರ್ಶಿತವಾಗಿವೆ. ಮೊದಲು ಸಲ ಗದಾಯುದ್ಧ ಪ್ರದರ್ಶಿತವಾದಾಗ ದುರ್ಯೋಧನನ ಪಾತ್ರ ವಹಿಸಿದ್ದ ಟಿ. ಎಂ. ಅಮೀರ್ ಅವರ ಹಾಗೂ ಅಶ್ವತ್ಥಾಮನ್ ನಾಟಕ ಪ್ರಯೋಗವಾದಾಗ ಅಶ್ವತ್ಥಾಮನ ಪಾತ್ರವನ್ನು ವಹಿಸಿದ್ದ ಎಸ್.ಎಸ್. ನಾರಾಯಣಶಾಸ್ತ್ರಿಗಳ ಅಮೋಘವಾದ ಅಭಿನಯ ಗಳನ್ನು ನಾಟಕ ಪ್ರಯೋಗಗಳನ್ನು ನೋಡಿದ ಯಾರೂ ಮರೆಯುವ ಹಾಗಿಲ್ಲ. "ಇಂಗ್ಲಿಷ್ ಗೀತಗಳು" ಲೋಕಪ್ರಸಿದ್ಧವಾದ, ಯುಗ ಪ್ರವರ್ತಕ ಕೃತಿ. ಇವೆಲ್ಲವುಗಳ ಮೂಲಕ ಹೊಸ ಸಾಹಿತ್ಯ ಸೃಷ್ಟಿಗೆ ಉತ್ತಮ ಮಾದರಿಗಳನ್ನು ಒದಗಿಸಿದರು. ಇತರ ವಿದ್ವಾಂಸರಿಂದ ಪಂಪ ಭಾರತ, ಪಂಪರಾಮಾಯಣ, ಕಾದಂಬರಿ ಮುಂತಾದ ಪರಿಷ್ಕೃತ ಕಾವ್ಯಸಂಗ್ರಹಗಳನ್ನು ಮಾಡಿಸಿ ಹಳಗನ್ನಡ ಸಾಹಿತ್ಯದ ಸಾರಗ್ರಹಣಕ್ಕೆ ದಾರಿ ಮಾಡಿಕೊಟ್ಟರು. ಅವರು ಸಂಪಾದಿಸಿದ "ಕನ್ನಡ ಕೈಪಿಡಿ" ಹಳಗನ್ನಡ ವ್ಯಾಕರಣ, ಅಲಂಕಾರಶಾಸ್ತ್ರ, ಛಂದಸ್ಸು, ಭಾಷಾ ಚರಿತ್ರೆ ಇವುಗಳನ್ನು ಒಳಗೊಂಡಿದ್ದು ಕನ್ನಡದ ಉನ್ನತ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಶಾಶ್ವತವಾದ ಕೈ ದೀಪವಾಗಿದೆ. ಅದರಲ್ಲಿ ಅವರೇ ಬರೆದಿರುವ "ಕನ್ನಡ ಛಂದಸ್ಸಿ"ನ ಭಾಗದಲ್ಲಿ ಆ ಶಾಸ್ತ್ರದಲ್ಲಿ ಅವರು ನಡಸಿದ್ದ ಸ್ವೋಪಜ್ಞ ಸಂಶೋಧನೆ ಅಡಕವಾಗಿದೆ. "ಕನ್ನಡ ಸಾಹಿತ್ಯ ಚರಿತ್ರೆ" (ಕೈಪಿಡಿಯ ಭಾಗ 2) ಅವರ ಇನ್ನೊಂದು ಮಾರ್ಗದರ್ಶಕ ಕೃತಿ. ನರಸಿಂಹಾಚಾರ್ಯರ ಕವಿಚರಿತ್ರೆಯೊಂದಿಗೆ ಇದನ್ನು ಹೋಲಿಸಿದರೆ ಬಿ.ಎಂ. ಶ್ರೀಯವರ ಕೃತಿಯ ವೈಶಿಷ್ಟ್ಯ ಏನೆಂಬುದು ಗೊತ್ತಾಗುತ್ತದೆ. ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದಾಗ "ಕನ್ನಡ ಬಾವುಟ" "ಕನ್ನಡ ನಾಡಿನ ಚರಿತ್ರೆ" ಇವುಗಳನ್ನು ಹೊರತಂದರು. "ಕನ್ನಡ ನುಡಿ" ವಾರಪತ್ರಿಕೆಯನ್ನು ಹೊರಡಿಸಿ, ಅದಕ್ಕೆ ಅ. ನ. ಕೃ. ಅವರನ್ನು ಸಂಪಾದಕರಾಗಿ ನಿಯೋಜಿಸಿದರು. ಅದು ಕನ್ನಡದ

ಗೆಜೆಟಿಯರ್ ಆಗಬೇಕು ಎಂದು ಕನಸು ಕಂಡರು. ಅದರ ಮುದ್ರಣಕ್ಕಾಗಿಯೇ ಅಚ್ಚುಕೂಟವನ್ನು ಕೈಯಿಂದ ಹಣಕೊಟ್ಟು (ರೂ. 6,000–00) ಸ್ಥಾಪಿಸಿದರು. ಸಂಘಗಳ ಒಕ್ಕೂಟಕ್ಕಾಗಿ ಸಂಘಗಳ ಸಮ್ಮೇಳನ; ಹಳಗನ್ನಡ ಕಾವ್ಯಗಳ ಅಧ್ಯಯನಕ್ಕಾಗಿ ವ್ಯಾಸಂಗಗೋಷ್ಠಿ, ಕನ್ನಡ ಲಿಪಿಗಳ ಸುಧಾರಣೆಗಾಗಿ ಲಿಪಿಸಂಸ್ಕರಣ ಸಮ್ಮೇಳನ, ಕನ್ನಡ ಸಾಹಿತ್ಯ ಪರೀಕ್ಷೆಗಳು (ಕಾವ, ಜಾಣ, ರತ್ನ) ಮಹಿಳಾ ಶಾಖೆ, — ಹೀಗೆ ಬಹುಮುಖವಾಗಿ ಪರಿಷತ್ತಿನ ಕಾರ್ಯಕ್ಷೇತ್ರವನ್ನು ವಿಸ್ತರಿಸಿ, ಅದನ್ನು ಕನ್ನಡಿಗರ ಸಾರ್ವಜನಿಕ ವಿದ್ಯಾಪೀಠವಾಗಿ ಬೆಳಸಬೇಕು ಎಂದು ಹಂಬಲಿಸಿ, ಪ್ರಯತ್ನಿಸಿ, ಪರಿಷತ್ತಿಗಾಗಿ ಅಕ್ಷರಶಃ ತನುಮನ ಧನಗಳನ್ನು ಮುಡಿಪಿಟ್ಟರು. ಈ ಕೆಲಸಗಳಲ್ಲೆಲ್ಲಾ ವಿಶ್ವವಿದ್ಯಾನಿಲಯದ ಅಧ್ಯಾಪಕವೃಂದ — ಅವರ ಶಿಷ್ಯಕೋಟಿ — ನೆರವಾಗಿದ್ದರು. ವಿಶ್ವವಿದ್ಯಾನಿಲಯದ ಪದವೀಧರರಲ್ಲದ ಕೆಲವು ಲೇಖಕರು — ಪರಿಷತ್ತನ್ನು ಆಕ್ರಮಿಸಿಕೊಳ್ಳಬೇಕೆಂದು ಪಣ ತೊಟ್ಟಿದ್ದ ಉಗ್ರಗಾಮಿಗಳು — ಅವರ ವಿರುದ್ಧ ಪ್ರಚಾರ ಮಾಡಿದ್ದು ಉಂಟು. ಅವರನ್ನೂ ಅವರ ಶಿಷ್ಯವೃಂದವನ್ನೂ "ಶ್ರೀಕಂಠಮಠ" ಎಂದು ಅವಹೇಳನ ಮಾಡಿದರು. ಹೊಗೆ ಎದ್ದ ವಾತಾವರಣದಲ್ಲಿ ಪರಿಷತ್ತಿನ ನಾಯಕರಾಗಿ ಮುಂದುವರಿಯಲು ಅವರು ಇಷ್ಟಪಡಲಿಲ್ಲ. ಅಲ್ಲಿಂದ ಮುಂದಕ್ಕೆ ಅವರ ಕಾರ್ಯಪಟುತ್ವ, ಕರ್ತೃತ್ವಶಕ್ತಿ, ಉಡುಗಿಹೋದುವು. ಬೆಂಗಳೂರೇ ಬೇಸರವಾಯಿತೋ, ಮೈಸೂರು ಕರ್ನಾಟಕಕ್ಕೂ ಉತ್ತರ ಕರ್ನಾಟಕಕ್ಕೂ ಜೀವಂತ ಸೇತು ಆಗ ಬಯಸಿದರೋ, ಅಂತೂ ಧಾರವಾಡದ ಒಂದು ಕಾಲೇಜಿನ ಪ್ರಿನ್ಸಿಪಾಲರಾಗಿ ಹೋಗಿ ಅಲ್ಲಿ ನೆಲಸಿದರು. ಆಡಿದ್ದನ್ನು ಮಾಡಿ ತೋರಿಸಿ, ಕನ್ನಡದ ಆಚಾರ್ಯ ಪುರುಷರಾದರು.

ಬಿ.ಎಂ. ಶ್ರೀಕಂಠಯ್ಯನವರು ತಮ್ಮ ಬದುಕಿನಲ್ಲಿ ಸಿಹಿಗಿಂತ ಕಹಿಯನ್ನೇ ಹೆಚ್ಚಾಗಿ ಉಂಡರು. ನಂಜನಗೂಡಿನ ಶ್ರೀಕಂಠೇಶ್ವರ ನಂಜುಂಡನೆಂದೇ ನಾಡಿನಲ್ಲಿ ಪ್ರಸಿದ್ಧ. ಕನ್ನಡದ ಶ್ರೀಕಂಠನೂ

ಸಂಜುಂಡನೇ ಆಗಿಬಿಟ್ಟನು. ಪೂರ್ವ ವಯಸ್ಸಿನಲ್ಲಿಯೇ ಸಸ್ಮಿಯ ಮಡದಿಯನ್ನು ಕಳೆದುಕೊಂಡು, ಏಕಮಾತ್ರ ಪುತ್ರ ಯಾವಜೀವವೂ ಅಂಧನಾಗಿ ಉಳಿಯಬೇಕಾದ ದಾರುಣ ಪ್ರಸಂಗವನ್ನು ಸಹಿಸುತ್ತ, ಕಂಡಸತ್ಯ ಸ್ಥಾಪನೆಗಾಗಿ ಅನೇಕರ ನಿಷ್ಠೂರವನ್ನು ಕಟ್ಟಿಕೊಂಡು, ಕೋಣೆಯ ಏಕಾಂತದಲ್ಲಿ ವಾಙ್ಮಯ ತಪಸ್ವಿಯಾಗಿ ತಮ್ಮ ತಪಸ್ಸಿನ ಫಲವನ್ನು ಕನ್ನಡ ನಾಡಿಗೆ ಧಾರೆಯೆರೆದು ಕೊಟ್ಟರು. ನಂಜನ್ನು ನುಂಗಿಕೊಂಡು ಅಮೃತವನ್ನು ಹಂಚಿದರು.

"The sweetest songs are those that tell of saddest thoughts" ("ಅತಿ ದಾರುಣ ದುಃಖವನ್ನು ಹೇಳಿ ಕೊಳ್ಳುವ ಆಲೋಚನೆಗಳೇ ಅತಿಮಧುರವಾದ ಹಾಡುಗಳು"ಎಂಬ ಕವಿ ವಾಣಿ ಅವರ ಬದುಕಿನಲ್ಲಿ ನಿಜವಾಯಿತು.

ಸಾಹಿತ್ಯೋಪಾಸಕರಾಗಿದ್ದ ಬಿ.ಎಂ.ಶ್ರೀ ರಾಜಕೀಯ ವ್ಯಕ್ತಿ ಯಾಗಿರಲಿಲ್ಲ, ದಿಟ. ಆದರೆ, ಸಾಹಿತ್ಯ ಮಾರ್ಗದಲ್ಲಿ, ಸಂಸ್ಕೃತಿಯ ನೆಲೆಯಲ್ಲಿ ಮೈಸೂರಿನಲ್ಲಿ ಹೆಜ್ಜೆಯೂರಿ, ವಿಶಾಲ ಕರ್ನಾಟಕದಲ್ಲಿ ಸುತ್ತಾಡಿ, ವಿಶ್ವಕಲ್ಪನೆಯಲ್ಲಿ ಮಿಂದು ಪುನೀತರಾಗಿದ್ದ ಮಹಾನು ಭಾವರು. ಈ ಕುರಿತು ಸ್ವಲ್ಪ ವಿವರಣೆ ನೀಡುವುದು ಅಗತ್ಯ ಎನಿಸುತ್ತದೆ.

ದಿವಂಗತ ಜಿ. ಪಿ. ರಾಜರತ್ನಂ ಸಾಹಿತ್ಯ ಪರಿಚಾರಕ ಎಂದು ಹೇಳಿಕೊಳ್ಳುತ್ತಿದ್ದರು. ಮುಖ್ಯವಾಗಿ ಸಮಕಾಲೀನರಾಗಿದ್ದ ಕೈಲಾಸಂ, ಡಿ.ವಿ.ಜಿ, ಮಾಸ್ತಿ, ಕುವೆಂಪು, ಮುಂತಾದವರ ಸಾಹಿತ್ಯವನ್ನು ಬರಹ — ಭಾಷಣಗಳ ಮೂಲಕ ಜನಕ್ಕೆ ಪರಿಚಯ ಮಾಡಿಕೊಡುವ ಕಾಯಕವನ್ನು ಇಟ್ಟುಕೊಂಡರು ಅವರು. ಕುವೆಂಪು ಅವರಂತೂ ಕನ್ನಡ ಪಾಂಚಜನ್ಯವನ್ನು ಊದುತ್ತ ಕನ್ನಡ ಡಿಂಡಿಮ ವನ್ನು ಬಾರಿಸಿ ಏಕೈಕ ಕರ್ನಾಟಕ ಬರಿಯ ಭೂಪಟ ಅಲ್ಲ, ಜೀವಂತ ಜನಪದ ಎಂಬುದನ್ನು ಸಾರಿದರು. ಮಾಸ್ತಿ ಕನ್ನಡಿಗರೆಲ್ಲ ಅಣ್ಣ ತಮ್ಮಂದಿರು, ಪ್ರಾಂತಭೇದ ಸಲ್ಲದು ಎಂದು ಸಾರಿ ಸಾರಿ ಹೇಳಿದರು. ಇವರಂತೆಯೇ ಇನ್ನೂ ಮುಂಚಿನಿಂದ ಹಳೆಯ

ಮೈಸೂರನ್ನೂ ಒಳಗೊಂಡಂತೆ, ಮೈಸೂರು ಮಹಾರಾಜರನ್ನೇ ಗೌರ್ನರಾಗಿ ಉಳ್ಳ ಏಕೀಕೃತ ಕರ್ನಾಟಕವನ್ನು ಬೆಂಬಲಿಸಿದವರು ಮುಖ್ಯವಾಗಿ ಕೌಜಲಗಿ ಶ್ರೀನಿವಾಸರಾಯರು, ಮತ್ತು ಮುದವೀಡು ಕೃಷ್ಣರಾಯರು. ಇವರೆಲ್ಲರಿಗೂ ಸ್ಫೂರ್ತಿಯ ಕೇಂದ್ರವಾಗಿ ಕಾಯಾ ವಾಚಾ ಮನಸಾ ದುಡಿದರು ಬಿ.ಎಂ.ಶ್ರೀ. ಕರ್ನಾಟಕತ್ವದ ಕಲ್ಪನೆಯನ್ನು ಜೀವದುಸಿರಾಗಿ ಮಾಡಿಕೊಂಡಿದ್ದ ಕನ್ನಡ ಕುಲ ಪುರೋಹಿತ ಆಲೂರು ವೆಂಕಟರಾಯರನ್ನು ಮೈಸೂರಿಗೆ ಬರಮಾಡಿಕೊಂಡು ಅವರನ್ನು ಮೈಸೂರು ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿದ ಶ್ರೇಯಸ್ಸು ಆ ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷರಾಗಿದ್ದ ಬಿ.ಎಂ.ಶ್ರೀ ಅವರಿಗೆ ಸಲ್ಲಬೇಕು. ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದಮೇಲಂತೂ ಕನ್ನಡ ಬಾವುಟವನ್ನು ಕೈಲಿ ಹಿಡಿದು, ಕನ್ನಡದ ಪ್ರಚಾರಕ್ಕಾಗಿ ಕನ್ನಡ ನಾಡಿನ ಮೂಲೆ ಮೂಲೆಯನ್ನು ಹೊಕ್ಕು ಬಳಸಿದರು. "ಕನ್ನಡ ತಾಯಿಗಾಗಿ ಭಿಕ್ಷೆ ಬೇಡುವ ದಾಸಯ್ಯ ನಾನು" ಎಂದು ಹೇಳಿಕೊಳ್ಳುತ್ತ ಪರಿಷತ್ತಿಗೆ ಸದಸ್ಯರನ್ನು ಕೂಡಿಸುತ್ತ, ಪರಿಷತ್ತನ್ನು ಕನ್ನಡ ತಾಯ ಗುಡಿಯಾಗಿ, ಕನ್ನಡಿಗರ ಸಾರ್ವಜನಿಕ ವಿದ್ಯಾಪೀಠವಾಗಿ ಮಾಡುವ ಸಂಕಲ್ಪವನ್ನು ಕೈಗೊಂಡರು. ಮೈಸೂರು ಮಹಾರಾಜರಲ್ಲಿ, ಮೈಸೂರಿನಲ್ಲಿ, ಇವರ ನಿಷ್ಠೆ ಭಕ್ತಿ ಮಿತಿಮಿರಿ ಹೆಚ್ಚು ಎಂದರೂ ಸಲ್ಲುತ್ತದೆ. ಈ ನಿಷ್ಠೆಯ ಪ್ರತೀಕ ನಾಲ್ಮಡಿ ಕೃಷ್ಣರಾಜ ಒಡೆಯರವರು ಇವರಿಗೆ ನೀಡಿದ ರಾಜಸೇವಾಸಕ್ತ ಎಂಬ ಬಿರುದು. ಸಾಮಾನ್ಯವಾಗಿ ಉನ್ನತ ಅಧಿಕಾರಿಗಳಿಗೆ ದೊರೆಯುತ್ತಿದ್ದ ಈ ಬಿರುದು ಮೊತ್ತಮೊದಲು ಒಬ್ಬ ಪ್ರಾಧ್ಯಾಪಕನಿಗೆ, ಕನ್ನಡದ ಸೇವಕನಿಗೆ ದೊರೆತುದೆಂದರೆ ಬಿ.ಎಂ.ಶ್ರೀಗೆ. ಮೈಸೂರು ಹಾಗೂ ಮೈಸೂರಿನ ರಾಜಮನೆತನದಲ್ಲಿ ಇವರು ತೋರಿದ ನಿಷ್ಠೆ ಇವರ "ಮೈಸೂರು ಮಕ್ಕಳು" (1920); ಶ್ರೀ ಕೃಷ್ಣರಾಜರಜತಮಹೋತ್ಸವ ಪ್ರಗಾಥ, (1927), "ಬಾನಕೊಂಡ ಕೃಷ್ಣನ್" (1940), "ಶ್ರೀಜಯನ ಬೆಳಕು" (1940), "ಅರಮನೆಯ ಒಸಗೆ" (1940) ಇವುಗಳಲ್ಲಿ

ಸುವ್ಯಕ್ತವಾಗಿದೆ. ಇಂಗ್ಲೆಂಡಿನ ರಾಜಮನೆತನ ಅಸ್ಥಾನ ಕವಿಯನ್ನು (Poet Laureate) ನೇಮಿಸಿಕೊಳ್ಳುವ ಸಂಪ್ರದಾಯ ಉಂಟು. ಕವಿ ರಾಜಕವಿ ಎನ್ನಿಸಿಕೊಂಡ ಮೇಲೆ ಅರಮನೆಯ ಶುಭ ಸಂದರ್ಭಗಳಲ್ಲಿ ರಾಜಮನೆತನವನ್ನು ಕುರಿತು ರಾಜಭಕ್ತಿಯನ್ನು ಪ್ರದರ್ಶಿಸುವ, ರಾಜರನ್ನು ಪ್ರಶಂಸಿಸುವ ಕವಿತೆಯನ್ನು ಬರೆಯ ಬೇಕಾಗಿತ್ತು. ರಾಜಸೇವಾಸಕ್ತ ಎಂಬ ಬಿರುದು ಬರುವ ಮೊದಲೇ ರಾಜಭಕ್ತಿದ್ಯೋತಕ ಕವಿತೆಯನ್ನು "ಶ್ರೀ"ಯವರು ರಚಿಸಿರುವುದು ಗಮನಾರ್ಹ. ಯಾವುದೇ ಒಂದು ದೂರದ ಪ್ರತೀಕ್ಷೆಯನ್ನು (Ulterior motive) ಇಟ್ಟುಕೊಂಡು ಶ್ರೀಯವರು ರಾಜಸ್ತುತಿಗೆ ಮನಸೋತರು ಎಂದು ನನಗೆನ್ನಿಸುವುದಿಲ್ಲ. ನಾಲ್ಮಡಿಯವರೇ ಆಗಲಿ ಜಯಚಾಮರಾಜರೇ ಆಗಲಿ ಕವಿಸ್ತುತಿಗೆ ಅಪಾತ್ರರಾಗಿರಲಿಲ್ಲ. ಕನ್ನಡ ಸಾಹಿತ್ಯ ರಾಜಾಶ್ರಯದಲ್ಲಿ ಸಂಪನ್ನವಾಗಿ ಬೆಳೆದು ಬಂದ ಸಂಗತಿ ಸರ್ವವಿದಿತ. ಕನ್ನಡ ಸಾಹಿತ್ಯ ಪರಿಷತ್ತಿಗೆ ಬಹಳ ಕಾಲ ರಾಜವಂಶದವರೇ ಅಧ್ಯಕ್ಷರಾಗಿದ್ದರು. ಮಹಾತ್ಮಾಗಾಂಧಿಯವರೇ ನಾಲ್ಮಡಿಯವರನ್ನು ಮೆಚ್ಚಿಕೊಂಡಿದ್ದರು. ಈ ಹಿನ್ನೆಲೆಯಲ್ಲಿ ಬಿ.ಎಂ.ಶ್ರೀ ಅವರ ಮನೋಧರ್ಮವನ್ನು ಅರಿಯಲು ಪ್ರಯತ್ನಿಸ ಬೇಕು. ತಾತ್ವಿಕವಾಗಿ, ಪ್ರಜಾರಂಜಕವಾದ ರಾಜಪ್ರಭುತ್ವದಲ್ಲಿ ಅವರಿಗೆ ದೃಢ ವಿಶ್ವಾಸ ಎಂದು ಹೇಳಬಹುದು. "ಭರತ ಮಾತೆಯೆ ಭರತ ಮಾತೆಯೆ ಎಂದು ನೀ ತಲೆಯೆತ್ತುವೆ" ಎಂಬ ಕವಿತೆಯನ್ನು ರಾಜಭಕ್ತಿಪರವಾದ ಕವಿತೆಗಳನ್ನು ಬರೆಯುವುವಕ್ಕೆ ಬಲು ಹಿಂದೆಯೇ (1914) ಬರೆದಿದ್ದರೆಂಬುದನ್ನು ನಾವು ಗಮನಿ ಸಬೇಕು. ಆ ಕವಿತೆಯಲ್ಲಿ ಪ್ರಾಚೀನ ಭಾರತ ದರ್ಶನ ನಮಗಾ ಗುತ್ತದೆ. "ಕನ್ನಡ ಮಾತೆಯ ಮೂಲಕ ಭಾರತ ಮಾತೆಯನ್ನು ಸೇವಿಸೋಣ. ಕನ್ನಡ ಮಾತೆ ಉದ್ಧಾರವಾದರೆ ಭಾರತ ಮಾತೆಯೂ ಅಭಿವೃದ್ಧಿಯಾಗುತ್ತಾಳೆ" ಎಂದು ನಂಬಿದ್ದರು. ಎಲ್ಲ ಪ್ರಾಂತಗಳೂ ಭಾರತದ ಅಂಗಭಾಗಗಳು ತಾನೆ? ಅಂಗಗಳ ಪೋಷಣೆಯಿಂದ ಶರೀರಪುಷ್ಟಿ.

ಬಿ.ಎಂ.ಶ್ರೀ ಅವರ "ಶುಕ್ರಗೀತೆ" ಒಂದು ಉನ್ನತ ಮಟ್ಟದ ಆಧ್ಯಾತ್ಮಿಕ ಕವಿತೆ. ಇದರಲ್ಲಿ ಸತ್ — ಅಸತ್, ಒಳಿತು — ಕೆಡುಕು ಇವುಗಳ ನಿರಂತರ ಹೋರಾಟವನ್ನು ಚಿತ್ರಿಸಿದ್ದಾರೆ. "ಋತುವೊಂದೆ ಗೆಲ್ಲುವುದು, ಅನೃತವಲ್ತು, ವಿಶ್ವಭಾರತಿ ಶರಣು; ಕಿರುತೀರ್ಥವಲ್ತು ಎಂಬ ಆಶಾವಾದದ ವಿಶ್ವವಾಣಿಯನ್ನು ಧ್ವನಿಸಿ, ತಮ್ಮ ವಿಶ್ವತೋವಿಶಾಲವಾದ ದೃಷ್ಟಿಯನ್ನು ಮೆರೆದಿದ್ದಾರೆ. ರಾಜಭಕ್ತರಾಗಿದ್ದ ಬಿ.ಎಂ.ಶ್ರೀ. ದೇಶಭಕ್ತರೂ ಆಗಿದ್ದರು. ಕನ್ನಡ ತಾಯ ನೋಟವನ್ನು ಕಂಡ ಅವರು ವಿಶ್ವದರ್ಶಿಯೂ ಆಗಿದ್ದರು.

# ಬಿ.ಎಂ.ಶ್ರೀ. ಅವರ ಬಹುಮುಖ ವಿದ್ವತ್ತು, ಬಹುಮುಖ ಪ್ರತಿಭೆ

ಬಿ.ಎಂ.ಶ್ರೀ. ಅವರ ವಿದ್ವತ್ತನ್ನೂ ಪ್ರತಿಭೆಯನ್ನೂ ಅವರ ವಿದ್ಯಾರ್ಥಿಗಳು ಅವರ ಪಾಠ ಪ್ರವಚನಗಳ ಮೂಲಕ ಗ್ರಹಿಸಿ, ಅವರು ಹರಿಯಿಸಿದ ಜ್ಞಾನಗಂಗೆಯಲ್ಲಿ ಮಿಂದು ಧನ್ಯರಾಗಿದ್ದಾರೆ; ಪಾವನರಾಗಿದ್ದಾರೆ. ಅವರ ವಿದ್ಯಾರ್ಥಿಗಳಲ್ಲದ ಅವರ ಸಮಕಾಲೀನರು ಅವರ ಸಾರ್ವಜನಿಕ ಭಾಷಣಗಳಲ್ಲಿ ಜಲಪಾತದಂತೆ ವರ್ಷಿಸುತ್ತಿದ್ದ ಅವರ ವಾಗ್‌ಝರಿಯನ್ನು ಕಂಡು ಬೆರಗಾಗಿದ್ದಾರೆ. ಆದರೆ ಇಂದಿನ ಪೀಳಿಗೆಗೆ ಆ ಭಾಗ್ಯವಿಲ್ಲದಿದ್ದರೂ ಅವರ ಕೃತಿಗಳ, ಬರಹಗಳ, ಬರಹಕ್ಕಿಳಿದ ಭಾಷಣಗಳ ಸಾರಸ್ವತನಿಧಿ ಉಳಿದುಬಂದಿದೆ. ಈ ನಾಡಿನ ಜ್ಞಾನಸಾಗರದ ಮೇಲ್ನೋಟವನ್ನು ತೋರುವ ನಾವೆಮಾತ್ರ ಅವರ ಸಾಹಿತ್ಯ. ಇಂಗ್ಲಿಷ್, ಕನ್ನಡ, ಸಂಸ್ಕೃತ, ಗ್ರೀಕ್ ಮತ್ತು ತಮಿಳು ಸಾಹಿತ್ಯಗಳ ಶ್ರೇಷ್ಠ ಕೃತಿಗಳನ್ನು ಅವರು ಹಲವಾರು ಸಲ ಓದಿ, ಮನನ ಮಾಡಿ, ಅವುಗಳ ಸಾರವನ್ನೆಲ್ಲ ಹೀರಿ ರಕ್ತಗತ ಮಾಡಿಕೊಂಡಿದ್ದರು. ಈ ಎಲ್ಲ ಓದನ್ನು ಓದಿಗಾಗಿ ಓದಿಕೊಂಡಿದ್ದರೆ? ಇಲ್ಲ. ಪಾಠಹೇಳುವುದಕ್ಕಾಗಿಯೇ? ಅಲ್ಲ. ಹೇಳಿಕೇಳಿ ಅವರು ಇಂಗ್ಲಿಷ್ ಪ್ರಾಧ್ಯಾಪಕರು. ಇಂಗ್ಲಿಷಿನ ಪಾಠಕ್ಕೆ ಗ್ರೀಕ್ ಸಾಹಿತ್ಯದ ಪರಿಚಯ ಬೇಕಾಗಿದ್ದಿರಬಹುದು. ಸಂಸ್ಕೃತ, ತಮಿಳುಗಳು ಏಕೆ?

ಅವರು ಸಂಸ್ಕೃತವನ್ನು ಶಾಲೆಯಲ್ಲಾಗಲಿ ಕಾಲೇಜಿನಲ್ಲಾಗಲಿ ಗುರುಮುಖೇನ ಕಲಿಯಲಿಲ್ಲ. ತಮಿಳನ್ನಾದರೂ ಅಷ್ಟೆ. ಈ ಭಾಷೆಗಳನ್ನು ಯಾಕೆ ಕಲಿತರು? ಅವರು ಸುಮಾರು 1928ರಲ್ಲಿ ಎಂದರೆ

ತಮ್ಮ 44ನೆಯ ವಯಸ್ಸಿನಲ್ಲಿ — ಕಲ್ಬುರ್ಗಿ ಸಾಹಿತ್ಯಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ–"ಈಗ ಸುಮಾರು 30ವರ್ಷಗಳಿಂದ ನಾನು ಕನ್ನಡವನ್ನು ಪ್ರೀತಿಯಿಂದ ಓದುತ್ತಿದ್ದೇನೆ" ಎಂದು ಹೇಳಿಕೊಂಡಿದ್ದಾರೆ. ಇಷ್ಟು ದೀರ್ಘಕಾಲದ ಕನ್ನಡ ಕಾವ್ಯೋಪಾಸನೆಯಲ್ಲಿ ಅವರು ಕಂಡುಕೊಂಡದ್ದೇನು ? "ಉತ್ತಮ ಕಾವ್ಯಗಳೂ ಕಾವ್ಯ ಭಾಗಗಳೂ ಕನ್ನಡದಲ್ಲಿ ಬೇಕಾದಷ್ಟು ಇಲ್ಲದೆ ಇಲ್ಲ. ಈ ವಿಷಯ ದಲ್ಲಿ ನಾವು ಯಾರಿಗೂ ತಲೆತಗ್ಗಿಸಬೇಕಾಗಿಲ್ಲ" ಎಂಬ ಆತ್ಮವಿಶ್ವಾಸದ, ಕನ್ನಡಿಗರ ಆತ್ಮಗೌರವವನ್ನು ಕಾಪಾಡುವ ನುಡಿಯಾಡಿದ್ದಾರೆ. ಹೀಗೆ ಹೇಳಿದಾಗ, ಅವರ ಮನಸ್ಸಿನಲ್ಲಿದ್ದುದು 20ನೆಯ ಶತಕಕ್ಕೆ ಹಿಂದಿನ ಹಳಗನ್ನಡ ನಡುಗನ್ನಡ ಸಾಹಿತ್ಯ. ಆ ಸಾಹಿತ್ಯ ರಾಶಿಯನ್ನು ವಿಮರ್ಶಾತ್ಮಕವಾಗಿ, ಪೂರ್ವಾಗ್ರಹವಿಲ್ಲದೆ, ಮತೀಯವಾದ ಸಂಕುಚಿತ ಭಾವನೆಯಿಲ್ಲದೆ, ಸಾಹಿತ್ಯರಸಿಕರಾಗಿ, ಸಾರಗ್ರಾಹಿಯಾಗಿ ಓದಿಕೊಂಡಿದ್ದರು; ಅವರ ಹಾಗೆ ಹಳೆಯ ಸಾಹಿತ್ಯವನ್ನು ತೌಲನಿಕ ದೃಷ್ಟಿಯಿಂದ—ಸಂಸ್ಕೃತ, ಇಂಗ್ಲಿಷು, ತಮಿಳು, ತೆಲುಗು, ಗ್ರೀಕ್, ಈ ಭಾಷೆಗಳ ಕಾವ್ಯಗಳಿಗಿಂತ ಶ್ರೇಷ್ಠವಾದ ಕಾವ್ಯಗಳು ಪ್ರಪಂಚ ದಲ್ಲಿ ಯಾವುವು ಇವೆ ? -- ಈ ಭಾಷಾ ಸಾಹಿತ್ಯ ಕೃತಿಗಳ ಹಿನ್ನೆಲೆಯಲ್ಲಿ ಕನ್ನಡ ಕಾವ್ಯಗಳನ್ನು ಹೃದ್ಗತಮಾಡಿಕೊಂಡವರು ಯಾರೂ ಇರಲಿಲ್ಲ, ಇಂದು ಯಾರೂ ಇಲ್ಲ, ಎಂದು ಧೈರ್ಯವಾಗಿ ಹೇಳಬಹುದು. ಕುಮಾರವ್ಯಾಸ ಪ್ರಶಸ್ತಿಗ್ರಂಥಕ್ಕೆ ಅವರು ಬರೆದಿರುವ ಮುನ್ನುಡಿಯಲ್ಲಿ ವ್ಯಾಸಕೃತ ಮಹಾಭಾರತವನ್ನು ಕುರಿತು ಹೇಳಿರುವ ಅವರ ಮಾತನ್ನು ನೋಡಿದರೆ ತಿಳಿಯುತ್ತದೆ, ಸಂಸ್ಕೃತ ಮೂಲಭಾರತವನ್ನು ಅವರು ಹೇಗೆ ಆಳವಾಗಿ ವ್ಯಾಸಂಗಮಾಡಿದ್ದರು ಎನ್ನುವುದು. ಎ. ಆರ್. ಕೃ. ಅವರು ಬರೆದಿರುವ "ಸಂಸ್ಕೃತ ನಾಟಕ"ಕ್ಕೆ ಬರೆದಿರುವ ಮುನ್ನುಡಿಯಲ್ಲಿ ಸಂಸ್ಕೃತ, ಗ್ರೀಕ್, ಇಂಗ್ಲಿಷ್ ಭಾಷೆಗಳ ನಾಟಕ ಸಾಹಿತ್ಯದಲ್ಲಿ ಅವರಿಗಿದ್ದ ಪ್ರೀತಿ, ಪಾಂಡಿತ್ಯಗಳ ಸ್ವರೂಪ ಎಂಥದು ಎನ್ನುವುದು ನಮಗೆ ಗೊತ್ತಾಗುತ್ತದೆ. ಶ್ರೀಯವರು ಷೇಕ್ಸ್‌ಪಿಯರನ ಎಲ್ಲ ನಾಟಕಗಳನ್ನೂ

ವ್ಯಾಸಂಗಮಾಡಿ ಮುಖ್ಯನಾದುವನ್ನು ಪಾಠ ಹೇಳಿದ್ದರೂ ಅವನ ದುರಂತ ನಾಟಕಗಳಲ್ಲಿ ಅವರ ಒಲವು, ಪ್ರಭುತ್ವ. ಅವರು ನಾಟಕಗಳನ್ನು ಬೋಧಿಸುತ್ತಿದ್ದ ರೀತಿ ಅದ್ಭುತ, ಅಸದೃಶ, ಎಂದು ಅವರ ಶಿಷ್ಯರು ಅನೇಕರು ಹೇಳುವುದನ್ನು ನಾನು ಕೇಳಿ ಬಲ್ಲೆ. ನಾನು ಮೈಸೂರು ಮಹಾರಾಜರವರ ಕಾಲೇಜಿನಲ್ಲಿ ಬಿ.ಎ. ತರಗತಿಯಲ್ಲಿ ವ್ಯಾಸಂಗ ಮಾಡುವ ವೇಳೆಗೆ ಅವರು ಬೆಂಗಳೂರಿನ ಸೆಂಟ್ರಲ್ ಕಾಲೇಜಿಗೆ ವರ್ಗವಾಗಿ ಹೋದದ್ದರಿಂದ ಇಂಗ್ಲಿಷ್ ಕಾವ್ಯ, ನಾಟಕ ಸಾಹಿತ್ಯದ ಪಾಠಪ್ರವಚನವನ್ನು ಅವರ ಸನ್ನಿಧಿ ಯಲ್ಲಿ ಕುಳಿತು ಕೇಳುವ ಭಾಗ್ಯ ನನಗೆ ಇಲ್ಲವಾಯಿತು. ಆದರೆ, ಎಂ. ಎ. ತರಗತಿಯಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ ಮೇಲಿನ ಉಪನ್ಯಾಸಗಳನ್ನು ಕೇಳುವ ಲಾಭ ಆ ನಷ್ಟವನ್ನು ಕೆಲಮಟ್ಟಿಗೆ ತುಂಬಿಕೊಟ್ಟಿತು. ಷೇಕ್ಸ್‌ಪಿಯರನ ದುರಂತ ನಾಟಕ, ಗ್ರೀಕ್ ರುದ್ರನಾಟಕ ಇವುಗಳಿಂದ ಪ್ರಭಾವಿತರಾದ ಅವರು ಕನ್ನಡದಲ್ಲಿ ಆ ಬಗೆಯ ನಾಟಕವನ್ನು ರೂಢಿಗೆ ತರಬೇಕೆಂದು ನಿಶ್ಚಯಿಸಿದರು. ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆಯಬೇಕೆಂದು ಸಂಕಲ್ಪಿಸಿದ್ದ ಅವರು "ಮಿತ್ರವಿಂದಗೋವಿಂದ" ನಾಟಕವನ್ನು ಹೊರತುಪಡಿಸಿದರೆ ಸ್ವತಂತ್ರವಾದ ಕನ್ನಡ ನಾಟಕ ಸೃಷ್ಟಿಯಾಗಿಲ್ಲ ಎನ್ನುವುದನ್ನು ಬಲ್ಲವರಾಗಿದ್ದರು. ಸಮಕಾಲೀನ ರಂಗಭೂಮಿಯಲ್ಲೂ ಸಂಸ್ಕೃತ ನಾಟಕಗಳ ಅನುವಾದಗಳೂ ಇತರ ಪೌರಾಣಿಕ ನಾಟಕಗಳೂ ವಿಜೃಂಭಿಸುತ್ತಿದ್ದುವು. ಕೈಲಾಸಂ ಸ್ವತಂತ್ರ ನಾಟಕ ಸೃಷ್ಟಿಗೆ ತೊಡಗಿದ್ದರೂ ಆ ದಿನಗಳಲ್ಲಿ ಅವರು ರಚಿಸಿದ್ದವೆಲ್ಲವೂ ಪ್ರಹಸನ ಗಳು. ಕನ್ನಡ ಕಾವ್ಯವ್ಯಾಸಂಗಾವಸರದಲ್ಲಿ ಶ್ರೀ ಅವರು ನಾಗಚಂದ್ರನ ಪಂಪರಾಮಾಯಣದಲ್ಲಿ ಪ್ರತಿನಾಯಕನಾದ ರಾವಣನ ಪಾತ್ರದಲ್ಲಿ ಬಹುಶಃ ಮೊತ್ತಮೊದಲಿಗೆ ಷೇಕ್ಸ್‌ಪಿಯರ್ ಕವಿ ಸೃಷ್ಟಿಸಿರುವ ದುರಂತನಾಯಕರ ಮಾದರಿಯ ನಾಯಕನನ್ನು ಗುರುತಿಸಿದರು. ರಾವಣನಲ್ಲಿ ಅವರು ಕಂಡ ರುದ್ರನಾಯಕನ ಕಲ್ಪನೆ ದುರಂತರಾವಣ (*A Tragic Ravana*) ಎಂಬ ಇಂಗ್ಲಿಷ್ ಲೇಖನವಾಗಿ ರೂಪ

ಗೊಂಡು ಮೈಸೂರು ವಿಶ್ವವಿದ್ಯಾನಿಲಯದ ಆಂಗ್ಲಭಾಷಾ ಪತ್ರಿಕೆ ಯಲ್ಲಿ 1923ರಲ್ಲಿ ಪ್ರಕಟವಾಯಿತು. ರನ್ನನ "ಗದಾಯುದ್ಧ"ದ ದುರ್ಯೋಧನನೂ ಒಬ್ಬ ದುರಂತನಾಯಕ ಎಂಬ ನಿಶ್ಚಯಕ್ಕೆ ಬಂದ ಅವರು ಆ ಕಾವ್ಯವನ್ನು ತಮ್ಮ ಕಲ್ಪನೆಗೆ ಅನುಗುಣವಾಗಿ ಒಂದು ದುರಂತ ನಾಟಕವನ್ನಾಗಿ ಪರಿವರ್ತಿಸಿದರು. ಅದು 1926ರಲ್ಲಿ ಪ್ರಕಟವಾಯಿತು. ಗ್ರಿಕ್ ರುದ್ರನಾಟಕದ ದಿವ್ಯಭವ್ಯತೆಗೆ ಮಾರು ಹೋಗಿದ್ದ ಅವರು ಸಾಫೊಕ್ಲೀಸನ ಅಯಾಕ್ಸ್ (*Ajax*) ರುದ್ರನಾಟ ಕದ ಕಥೆಯನ್ನು ಮಹಾಭಾರತದ ಅಶ್ವತ್ಥಾಮನ ಜೀವನಕಥೆಯ ಚೌಕಟ್ಟಿನಲ್ಲಿ ಅಳವಡಿಸಿಕೊಂಡು ಬಲುಮಟ್ಟಿಗೆ ಸ್ವತಂತ್ರವಾದ ಕೃತಿ ಎನ್ನುವಮಟ್ಟಿಗೆ "ಅಶ್ವತ್ಥಾಮನ್" ರುದ್ರನಾಟಕವನ್ನು ರಚಿಸಿದರು. (1929). ಗ್ರೀಕ್ ದುರಂತನಾಟಕದ ಇನ್ನೊಂದು ಮಾದರಿಯಾದ ಈಸ್ಕಿಲಸ್ಸನ (*Persians*) ನಾಟಕವನ್ನು "ಪಾರಸಿಕರು" ಎಂಬ ಹೆಸರಿಟ್ಟು ಅನುವಾದಮಾಡಿ 1935ರಲ್ಲಿ ಪ್ರಕಟಿಸಿದರು. ಅವರ ಈ ರುದ್ರನಾಟಕಗಳಿಗೆ ಸರಿಸಾಟಿಯಾಗಬಲ್ಲ ಅನುವಾದವಾಗಲಿ ಸ್ವತಂತ್ರಕೃತಿಯಾಗಲಿ ಈವರೆಗೂ ಸೃಷ್ಟಿಯಾಗಿಲ್ಲ. ಕುವೆಂಪು ಅವರ "ರಕ್ತಾಕ್ಷಿ" (*Hamlet* ನಾಟಕದ ರೂಪಾಂತರ) ಒಂದು ಕಾಲದಲ್ಲಿ ಸಹೃದಯರ ಮೆಚ್ಚುಗೆಯನ್ನು ಪಡೆದರೂ "ಅಶ್ವತ್ಥಾಮನ್" ನಾಟಕಕ್ಕೆ ಸರಿದೊರೆ ಎನಿಸದು. ಅದು ಹೇಗಾದರೂ ಇರಲಿ. ರುದ್ರನಾಟಕದ ಶ್ರೇಷ್ಠ ಮಾದರಿಗಳನ್ನು ಕನ್ನಡಕ್ಕೆ ನೀಡಿದ ಕೀರ್ತಿ ಶ್ರೀಯವರ ಪಾಲಿಗೆ ಸಲ್ಲುತ್ತದೆ. "ಶ್ರೀ"ಯವರ ಪ್ರಭಾವದಿಂದ ಅವರ ಶಿಷ್ಯರೇ ಆದ ಡಾ॥ ಕ.ವೆಂ.ರಾಘವಾಚಾರ್ಯರು ಸಾಫೊಕ್ಲೀಸನ "ಅಂತಿಗೊನೆ"ಯನ್ನು "ಅಶ್ವತ್ಥಾಮನ್" ನಾಟಕದಂತಹ ಅಚ್ಚ ಹಳಗನ್ನಡ ಶೈಲಿಯಲ್ಲಿ ಭಾಷಾಂತರ ಮಾಡಿದ್ದಾರೆ. ಇದೊಂದು ಶ್ರೇಷ್ಠವಾದ ಭಾಷಾಂತರ ಎನ್ನಲಡ್ಡಿಯಿಲ್ಲ. ಈಚೆಗೆ ಹೊಸಗನ್ನಡ ದಲ್ಲೂ ಗ್ರೀಕ್‌ನಾಟಕಗಳ ಒಂದೆರಡು ಅನುವಾದಗಳು ಬಂದಿವೆ. ಶ್ರೀಯವರು ತೆರೆದ ಈ ಪರ್ವತಮಾರ್ಗವನ್ನು ಕ್ರಮಿಸಬಲ್ಲ ಧೀರರು ಸದ್ಯಕ್ಕೆ ಯಾರೂ ಕಂಡುಬಂದಿಲ್ಲ.

"ರುದ್ರ ನಾಟಕ"ವನ್ನು ಕುರಿತು ಒಂದು ಮೀಮಾಂಸಾ ಗ್ರಂಥವನ್ನು ಬರೆಯಬೇಕೆಂದು ಶ್ರೀಯವರು ಉದ್ದೇಶಿಸಿದ್ದರು. ಕನ್ನಡದ ದುರ್ದೈವ, ಅದು ನೆರವೇರಿದಂತೆ ಕಾಣುವುದಿಲ್ಲ, ಅಂತೆಯೇ ಷೇಕ್ಸ್‌ಪಿಯರ್‌ನ ದುರಂತ ನಾಟಕಗಳ ವಿಚಾರ: ಷೇಕ್ಸ್‌ಪಿಯರ್ ಬರೆದ ಮ್ಯಾಕ್‌ಬೆತ್ ನಾಟಕವನ್ನು ಪೂಜ್ಯ ಡಿ.ವಿ.ಜಿ. ಸಮರ್ಥವಾಗಿ ಅನುವಾದಿಸಿದ್ದಾರೆ, ದಿಟ. ಆದರೆ ಶ್ರೀಯವರ ಕನ್ನಡದ ಇಂಪು ಸೊಂಪುಗಳು ಡಿ.ವಿ.ಜಿ. ಅವರ ಭಾಷೆಯಲ್ಲಿ ಇರಲು ಸಾಧ್ಯವಿಲ್ಲ. ಶ್ರೀಯವರ ಶಿಷ್ಯರೇ ಆದ ಪೂಜ್ಯ ಮಾಸ್ತಿಯವರು ಆಂಗ್ಲ ಮಹಾಕವಿಯ ಹಲಕೆಲವು ನಾಟಕ ಭಾಗಗಳನ್ನು ಭಾಷಾಂತರಿಸಿದ್ದಾರೆ. ಇವರ ಸಿರಿಗನ್ನಡದ ಸೊಗಸೇ ಒಂದು ತೆರ. ಶ್ರೀಯವರು ಷೆಕ್ಸ್‌ಪಿಯರ್ ನಾಟಕಗಳನ್ನು ಅನ್ಯಾದೃಶವಾಗಿ ಅವರ ಜೊತೆಗಾರರಾಗಿದ್ದ ಬ್ರಿಟಿಷ್ ಪ್ರಾಧ್ಯಾಪಕರು ಕರುಬುವಂತೆ ಬೋಧಿಸಿದವರು. ಅದೇಕೆ ಅವುಗಳನ್ನು ಅನುವಾದಿಸಲು ಇಲ್ಲವೆ ರೂಪಾಂತರಿಸಲು ಮನಸ್ಸು ಮಾಡಲಿಲ್ಲವೋ ತಿಳಿಯದು. ಕುವೆಂಪು ಮತ್ತು ಡಿ.ವಿ.ಜಿ. ಆ ದಾರಿಯಲ್ಲಿ ಸಾಗಿದ ಮೇಲೆ ಅದನ್ನು ಕಂಡುಕೊಂಡು ಅವರುಗಳೇ ಆ ದಾರಿಯಲ್ಲಿ ಇನ್ನೂ ಮುಂದೆ ಮುಂದೆ ಸಾಗಲಿ ಎಂದು ಸುಮ್ಮನಾದರು ಎಂದು ನಾನು ಊಹಿಸುತ್ತೇನೆ. "ರುದ್ರನಾಟಕ" ರಚನೆಯ ಅವರ ಸಂಕಲ್ಪವನ್ನು ಅವರ ಶಿಷ್ಯರಾದ ಪೂಜ್ಯ ಎಸ್.ವಿ. ರಂಗಣ್ಣನವರು ತಮ್ಮ "ಗಂಭೀರನಾಟಕ" ದಿಂದ ಈಡೇರಿಸಿದ್ದಾರೆ. ಇಷ್ಟೇ ನಮಗಿರುವ ಸಮಾಧಾನ.

ಬಿ.ಎಂ.ಶ್ರೀ. ಅವರ ತಮಿಳು ಪಾಂಡಿತ್ಯ ಅಗಾಧವಾದದ್ದು. ಅವರ ಕಾಲಕ್ಕೆ ಭಾಷಾ ವಿಜ್ಞಾನ (*Linguistics*), ಈಗಿನಷ್ಟು ಸಮೃದ್ಧವಾಗಿ, ಸಂಶೋಧನಾತ್ಮಕವಾಗಿ, ಶಾಖೋಪಶಾಖೆಗಳಾಗಿ ಬೆಳೆದಿರಲಿಲ್ಲ. ಡಾ|| ಕಾಲ್ಡ್‌ವೆಲ್ ಅವರ ಮಹಾಗ್ರಂಥ, (*A Comparative Grammar of the Dravidian Languages*) ಒಂದೇ ಇದ್ದದ್ದು. ಕಿಟೆಲ್‌ರವರೂ ತಮ್ಮ ನಿಘಂಟುವಿನಲ್ಲಿ ಕನ್ನಡ ಪದಗಳಿಗೆ ಜ್ಞಾತಿಗಳಾದ ಇತರ ದ್ರಾವಿಡಭಾಷೆಗಳ ಪದಗಳನ್ನು

ಕೊಟ್ಟಿದ್ದಾರೆ. ಇವುಗಳನ್ನು ಅಧ್ಯಯನ ಮಾಡಿದ್ದ ಶ್ರೀಯವರು ಸ್ವತಂತ್ರವಾಗಿ ತಮಿಳು ವ್ಯಾಕರಣಗಳು, ಪ್ರಪ್ರಾಚೀನ ತಮಿಳು ಕಾವ್ಯಗಳಾದ ತಿರುಕ್ಕುರಳ್, ಶಿಲಪ್ಪದಿಗಾರಂ, ಮುಂತಾದುವನ್ನು ವ್ಯಾಸಂಗಮಾಡಿದ್ದರು. ಅವರು ದೀರ್ಘಕಾಲದ ಪರಿಶ್ರಮದಿಂದ ತಿರುಕ್ಕುರಳ್ ಪದ್ಯಗಳನ್ನು ಅದೇ ಮಾದರಿಯ ಹಳಗನ್ನಡದಲ್ಲಿ ಅನುವಾದ ಮಾಡಿದ್ದರೆಂದು ಅವರ ನಿಕಟವರ್ತಿಗಳಾದ ಶಿಷ್ಯರು ಹೇಳುತ್ತಿದ್ದರು. ಅವರು ಬದುಕಿದ್ದಾಗಲೇ ಅವರ ಅನುವಾದ ನಷ್ಟವಾಗಿದ್ದು ಅದರ ಪುನರನುವಾದಕ್ಕೆ ಅವರು ಕೈಹಾಕಲಿಲ್ಲವೆಂದು ತೋರುತ್ತದೆ. ಅವರ ತಮಿಳು ಜ್ಞಾನಕ್ಕೆ ಸ್ಪಷ್ಟ ನಿದರ್ಶನಗಳೆಂದರೆ, ಕನ್ನಡದ ಕೆಲವು ವರ್ಣಗಳೂ ಶಬ್ದರೂಪಗಳೂ ನಮಗೆ ಈಗ ದೊರೆತಿರುವ ಅತ್ಯಂತ ಪ್ರಾಚೀನ ತಮಿಳು ಶಬ್ದರೂಪಗಳಿಗಿಂತ ಹೆಚ್ಚು ಪ್ರಾಚೀನ ಎಂದು ಉದಾಹರಣಪೂರ್ವಕ ಸ್ಪಷ್ಟಪಡಿಸಿ, ಮಲಯಾಳದಂತೆ ಕನ್ನಡವೂ ತಮಿಳಿನಿಂದ ಹುಟ್ಟಿದ್ದು ಎಂಬ ಅಪಕಲ್ಪನೆಯನ್ನು ಹೋಗಲಾಡಿಸಿದ್ದು, ಹಾಗೂ ಪ್ರಾಚೀನ ತಮಿಳು ವ್ಯಾಕರಣ ಸೂತ್ರಗಳ ಮಾದರಿಯಲ್ಲಿ ಕೆಲವು ಸೂತ್ರಗಳನ್ನು ರಚಿಸಿರುವುದು, ಮತ್ತು ಕನ್ನಡ ಕೈಪಿಡಿಯಲ್ಲಿ ಕನ್ನಡ ದೇಸಿ ಛಂದಸ್ಸಿಗೂ ತಮಿಳು ಛಂದಸ್ಸಿಗೂ ಇರುವ ನಂಟನ್ನು ಮೊತ್ತ ಮೊದಲಿಗೆ ಗುರುತಿಸಿ, ವಿವರಿಸಿರುವುದು. ಶ್ರೀಯವರ ಹಳಗನ್ನಡದ ಪಾಂಡಿತ್ಯಕ್ಕೆ ಅವರು ಅಶ್ವತ್ಥಾಮನ್ ನಾಟಕದಲ್ಲಿ ಪ್ರಯೋಗಿಸಿರುವ ಅಚ್ಚ ಹಳಗನ್ನಡದ ಶೈಲಿ ಅನ್ಯಾದೃಶ ನಿದರ್ಶನ. ಪಂಪ ರನ್ನ ಕೇಶಿರಾಜರೇ ಈಗ ಅವತರಿಸಿ ಈ ನಾಟಕವನ್ನು ಓದಿದರೆ, ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವುದು ಖಂಡಿತ.

ಉತ್ತರ ದಕ್ಷಿಣ ಧ್ರುವವಲಯದ ಸಾಗರಗಳಲ್ಲಿ ತೇಲುವ ನೀರ್ಗಲಗುಡ್ಡದ ತುದಿ (*Tip of the ice-berg*) ಮಾತ್ರ ಕಾಣುತ್ತಿದ್ದು, ಅದರ ಒಡಲ ಬಹುಭಾಗ ನೀರಿನಲ್ಲಿ ಮುಳುಗಿರುತ್ತದೆ. ಶ್ರೀಯವರ ಬರಹಗಳಲ್ಲಿ ಈಗ ನಮಗೆ ಸೂಚ್ಯವಾಗಿ ವ್ಯಕ್ತವಾಗುವ ಪಾಂಡಿತ್ಯ ಆ ನೀರ್ಗಲ್ಲತುದಿಯ ಹಾಗೆ. ಈ ಲೇಖನ

ಆ ತುದಿಯ ತುದಿಯನ್ನು ತೋರುವಲ್ಲಿಯೂ ಯಶಸ್ವಿಯಾಗಿಲ್ಲ ಎಂಬ ಅರಿವು ಈ ಲೇಖಕನಿಗಿದೆ. ಅವರ ಪಾಂಡಿತ್ಯದ ಪರಿಚಯವನ್ನು ಸೋದಾಹರಣವಾಗಿ ಮಾಡಿಕೊಡುವ ಉದ್ದೇಶ ಈ ಬರಹದ ವ್ಯಾಪ್ತಿಗೆ ಹೊರತಾದದ್ದು.

# ಪರಿಷತ್ತನ್ನು ಬೆಳಸಿದ ಬಿ.ಎಂ.ಶ್ರೀ.

## ಹಿನ್ನೆಲೆ

೧೯೧೫ರ ಮೇ ೫ರಂದು ಜನ್ಮತಳೆದು ಇಂದು ಜಿಲ್ಲಾ ಮತ್ತು ತಾಲೂಕು ಸಮಿತಿಗಳನ್ನು ಹೊಂದಿ, ಹೆಸರಿಗೆ ಮಾತ್ರ ಅಖಿಲ ಕರ್ನಾಟಕದ ವ್ಯಾಪ್ತಿಯನ್ನು ಹೊಂದಿದ್ದ ಪರಿಷತ್ತು ನಿಜಕ್ಕೂ ಅಖಿಲ ಕರ್ನಾಟಕದ ಸಮಸ್ತ ಕನ್ನಡಿಗರ ಸಂಸ್ಥೆಯಾಗಿ ಬೆಳೆದು ಆಲದ ಮರದಂತೆ ಒಂದು ಜ್ಞಾನವೃಕ್ಷವಾಗಿ ತನ್ನ ಕೊಂಬೆರೆಂಬೆಗಳನ್ನು ಹತ್ತೂ ದಿಕ್ಕಿಗೆ ಹರಡಿ, ಹರಡಿಕೊಂಡತ್ತಲೆಲ್ಲಾ ಬಿಳಲುಗಳನ್ನು ಊರಿ, ದೆಹಲಿಯಲ್ಲಿ ಕನ್ನಡ ಡಿಂಡಿಮವನ್ನು ಬಾರಿಸಿ ಭಾರತದ ಗಮನ ಕನ್ನಡದತ್ತ ಹರಿಯುವಂತೆ ಮಾಡಿದವರು ಯಾರು ಯಾರು ಎಂಬ ಪ್ರಶ್ನೆಗೆ ಉತ್ತರ ಹುಡುಕಹೊರಟಾಗ ಇತ್ತೀಚಿನ ವರ್ಷಗಳಲ್ಲಿ ಪರಿಷತ್ತಿನ ಅಧ್ಯಕ್ಷರುಗಳಾದವರು ಐತಿಹಾಸಿಕ ಮಹತ್ವದ ಈ ಬೆಳವಣಿಗೆಗೆ ಕಾರಣಭೂತರು ಎಂದು ತೋರದೆ ಇರದು. ಆದರೆ ಪರಿಷತ್ತಿನ ಚರಿತ್ರೆಯನ್ನು ತಕ್ಕಮಟ್ಟಿಗೆ ಬಲ್ಲವರಿಗೆ, ಪ್ರಾಯಕ್ಕೆ ಬಂದರೂ ಮುಪ್ಪಿನ ಚಿಹ್ನೆಗಳನ್ನು ತಳೆದ ಈ ಸಂಸ್ಥೆಗೆ ಕಾಯಕಲ್ಪವನ್ನು ಮಾಡಿ ಪಂಡಿತಾಭಿಮುಖವಾಗಿದ್ದ ಸಂಸ್ಥೆಯನ್ನು ಜನಾಭಿಮುಖವಾಗಿ ಮಾಡಿದವರು ಕೀರ್ತಿಶೇಷ ಬಿ.ಎಂ.ಶ್ರೀ. ಎಂಬ ಸಂಗತಿ ಅಂಗಯ್ಯ ನೆಲ್ಲಿಯಂತೆ ಸುಸ್ಪಷ್ಟ.

ಪರಿಷತ್ತು ಸ್ಥಾಪನೆಯಾದ ಹೊಸದರಲ್ಲಿ ಎಚ್.ವಿ. ನಂಜುಂಡಯ್ಯನವರು ಪರಿಷತ್ತಿನ ಪ್ರಥಮ ಅಧ್ಯಕ್ಷರಾಗಿದ್ದರೂ (೧೯೧೫–೧೯೨೦) ಆ ತರುವಾಯ ಅಧ್ಯಕ್ಷರುಗಳೆಲ್ಲರೂ ಸು ೧೯೪೧ರ ವರೆಗೆ ರಾಜಮನೆತನಕ್ಕೆ ಸೇರಿದವರು. ಕಾಂತರಾಜ ಅರಸು, ಮೈಸೂರಿನ

ಯುವರಾಜರು, ಮಹಾರಾಜ ಜಯಚಾಮರಾಜ ಒಡೆಯರು. ಪರಿಷತ್ತಿಗೆ ನೇರಸಂಬಂಧ ಹೊಂದಿದವರು ಅದರ ಉಪಾಧ್ಯಕ್ಷರುಗಳು: ಎಂ. ಶಾಮರಾಯರು (೧೯೧೬-೧೯), ಕರ್ಪೂರ ಶ್ರೀನಿವಾಸ ರಾಯರು (೧೯೧೯-೧೯೩೩). ಆದರೆ. ಪರಿಷತ್ತಿನ ದಿನನಿತ್ಯದ ಕಾರ್ಯಗಳು, ಪರಿಷತ್‌ಪತ್ರಿಕೆಯ ಪ್ರಕಟನೆ, ಇತರ ಪ್ರಕಟನೆಗಳು, ಇತ್ಯಾದಿಗಳನ್ನು ನೋಡಿಕೊಳ್ಳುವುದು ಗೌ|| ಕಾರ್ಯದರ್ಶಿಯ ಪಾಲಿಗೆ ಬಿದ್ದಿತ್ತು. ಸ್ವಯಂ ಆಡಳಿತ ಸಂಸ್ಥೆ ಒಂದರಲ್ಲಿ ಇರಬೇಕಾದದ್ದೇ ಹೀಗೆ. ಗೌ|| ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿದ್ದ ಬೆಳ್ಳಾವೆ ವೆಂಕಟನಾರಾಯಣಪ್ಪನವರು ಆ ಪದವಿಯಲ್ಲಿ ನಾಲ್ಕು ವರ್ಷ ಕೆಲಸ ಮಾಡಿದರು; ಗೌ|| ಕೋಶಾಧಿಕಾರಿಗಳಾಗಿ ಆರು ವರ್ಷ ಕೆಲಸ ಮಾಡಿದರು. ಇನ್ನುಳಿದ ಅವಧಿಗಳಲ್ಲಿ ಯಾರೇ ಬರಲಿ, ಯಾರೇ ಇರಲಿ, ಪರಿಷತ್ತಿನ ಎಲ್ಲ ಕಾರ್ಯಗಳನ್ನೂ ನಿರ್ವಹಿಸುತ್ತಿದ್ದವರು ಅವರೇ. ಇವರ ಕಾಲದಲ್ಲೇ ಪಂಪ ರಾಮಾಯಣ, ಪಂಪಭಾರತ, ಶಬ್ದಮಣಿದರ್ಪಣ, ಸೋಮೇಶ್ವರ ಶತಕ — ಈ ಅಮೂಲ್ಯ ಹಳಗನ್ನಡ ಗ್ರಂಥಗಳು ಪ್ರಕಟವಾದದ್ದು. ಪರಿಷತ್ ಪತ್ರಿಕೆಗೂ ಇವರದ್ದೇ ಸಂಪಾದಕೀಯ ಹೊಣೆಗಾರಿಕೆ. ಒಟ್ಟಿನಲ್ಲಿ, "ಪರಿಷತ್ತು ಎಂದರೆ ವೆಂಕಟನಾರಾಯಣಪ್ಪ ವೆಂಕಟನಾರಾಯಣಪ್ಪ ಎಂದರೆ ಪರಿಷತ್ತು" ಎಂಬ ಭಾವನೆ ಬೆಳೆದಿತ್ತು.

ದೇಶದ ಎಲ್ಲ ಕಾರ್ಯಕ್ಷೇತ್ರಗಳಲ್ಲೂ ಹೊಸಗಾಳಿ ಬೀಸುತ್ತಿತ್ತು. ವೆಂಕಟನಾರಾಯಣಪ್ಪನವರ ಆಡಳಿತಾವಧಿಯ ಕೊನೆಯ ವರ್ಷಗಳಲ್ಲಿ ಪರಿಷತ್ತಿನ ಹೊಸ ಕಟ್ಟಡ — ಶ್ರೀಕೃಷ್ಣರಾಜ ಪರಿಷನ್ಮಂದಿರ — ನಿರ್ಮಾಣವಾಗಿದ್ದರೂ ಅಲ್ಲಿ ಹೊಸಗಾಳಿ ಬೀಸುತ್ತಿರಲಿಲ್ಲ. ಯಾವ ಗಾಳಿ ಬೀಸುವುದೂ ನಿಂತುಹೋಗಿತ್ತು ಎಂದರೂ ಸಲ್ಲುತ್ತದೆ. ಪರಿಷತ್ತಿಗೆ ಹೊಸ ಚೈತನ್ಯ ತುಂಬುವಂಥ ಸಮರ್ಥ ವ್ಯಕ್ತಿ ಪರಿಷತ್ತಿನ ಆಡಳಿತ ಸೂತ್ರವನ್ನು ವಹಿಸಿಕೊಳ್ಳಬೇಕಾದದ್ದು ಕಾಲದ ಕರೆಯಾಗಿತ್ತು. ಪರಿಷತ್ತಿನ ಚರಿತ್ರೆಯ ಈ ಘಟ್ಟಕ್ಕೆ "ಹಳೆಯ ವ್ಯವಸ್ಥೆ ಹೊಸ ವ್ಯವಸ್ಥೆಗೆ ಎಡೆ ಬಿಟ್ಟುಕೊಡುತ್ತದೆ; ಏಕೆಂದರೆ

ಯಾವುದೇ ವ್ಯವಸ್ಥೆ ಎಷ್ಟೇ ಒಳ್ಳೆಯದಾದರೂ ಅದು ಲೋಕ ವ್ಯವಹಾರವನ್ನು ಹದಗೆಡಿಸುತ್ತದೆ" ಎಂಬ ಟೆನಿಸನ್ ಕವಿಯ ಮಾತು ಅನ್ವಯಿಸುತ್ತದೆ". ★

ಈ ಪರಿಸ್ಥಿತಿಯನ್ನು ಮನಗಂಡ ಹೊಸ ದೃಷ್ಟಿಯ ಕನ್ನಡ ವಿದ್ವಾಂಸ ಸಾಹಿತಿಗಳು ಕೆಲವರು ಪೂರ್ವಪ್ರಚಾರದ ಸಿಡುಗು, ಪಕ್ಷನಿಷ್ಠೆಯ ಅಥವಾ ವ್ಯಕ್ತಿನಿಷ್ಠೆಯ "ರಾಜಕೀಯ" ಮತ್ತು ಅದರ ಸದ್ದುಗದ್ದಲ, ಇವು ಯಾವುದಕ್ಕೂ ಅವಕಾಶಕೊಡದೆ ಮಡಿಕೇರಿಯ ಸಾಹಿತ್ಯ ಸಮ್ಮೇಳನ ಸಂದರ್ಭದಲ್ಲಿ (ಡಿಸೆಂಬರ್ ೧೯೩೨) ನಡೆದ ಪರಿಷತ್ತಿನ ವಾರ್ಷಿಕಾಧಿವೇಶನದಲ್ಲಿ ಡಿ. ವಿ. ಗುಂಡಪ್ಪನವರನ್ನು ಉಪಾಧ್ಯಕ್ಷರನ್ನಾಗಿ ಮಾಡಿದರು. ನಿರೀಕ್ಷೆ ಫಲಿಸಿತು; ಡಿ. ವಿ. ಗುಂಡಪ್ಪನವರು ಪರಿಷತ್ತಿನ ಉಪಾಧ್ಯಕ್ಷರಾದರು; ೧೯೩೩ರ ಫೆಬ್ರವರಿಯಲ್ಲಿ ಗೌ|| ಕೋಶಾಧಿಕಾರಿಗಳಾಗಿದ್ದ ಬೆಳ್ಳಾವೆಯವರು ರಾಜನಾಮೆ ನೀಡಿದರು.

ಬೆಳ್ಳಾವೆಯವರು ಈ ಬೆಳವಣಿಗೆಯನ್ನು ನಿರೀಕ್ಷಿಸಿರಲಿಲ್ಲ. ೧೯೩೩ರ ಡಿಸೆಂಬರಿನಲ್ಲಿಯೇ ಒಪ್ಪಿಗೆ ಪಡೆದು ಸಹಾಯಕ ಕಾರ್ಯದರ್ಶಿಯ ಸ್ಥಾನವನ್ನು ಕಲ್ಪಿಸಿ, ಸಂಸ್ಕೃತ ಕನ್ನಡ ಬಲ್ಲ ಎಂ. ಎ ಪದವೀಧರನೊಬ್ಬನ ನೇಮಕಕ್ಕಾಗಿ ಹುದ್ದೆಯನ್ನು ಅಂದಿನ ಪತ್ರಿಕೆಗಳಲ್ಲಿ ಪ್ರಕಟಿಸಿದರು. ಹುದ್ದೆಗೆ ಇಬ್ಬರು ಅಭ್ಯರ್ಥಿಗಳು: ದೇವುಡು ನರಸಿಂಹ ಶಾಸ್ತ್ರೀ ಮತ್ತು ಈ ಲೇಖಕ (ಎಂ. ವಿ. ಸೀತಾರಾಮಯ್ಯ). ಮೊದಲಿನವರನ್ನು ನೇಮಕ ಮಾಡಬೇಕೆಂಬುದು ಬೆಳ್ಳಾವೆಯವರ ಅಪೇಕ್ಷೆ. ನೇಮಕ ನಡೆದದ್ದು ಗುಂಡಪ್ಪನವರ ಕಾಲದಲ್ಲಿ. ಅವರು, ಎಂ. ವಿ. ಸೀ. ಯನ್ನು ಅವರ ವಿದ್ಯಾಗುರುಗಳಾಗಿದ್ದ ಟಿ. ಎಸ್. ವೆಂಕಣ್ಣಯ್ಯನವರ ಶಿಫಾರಸನ್ನು ಮನ್ನಿಸಿ ನೇಮಕ ಮಾಡಿದರು.

★ *"Old order changeth yielding place to the new, lest one good custom should corrupt the world" — Lord Tennyson.*

ಗಮಕ ತರಗತಿಗಳ ಪ್ರಾರಂಭ, ಶಾಲಾ ಉಪಾಧ್ಯಾಯರ ಪ್ರಯೋಜನಾರ್ಥ ಬೇಸಗೆಯಲ್ಲಿ ಆಧುನಿಕ ವಿಚಾರೋಪನ್ಯಾಸ ಸಪ್ತಾಹ, (ಇದೇ ಮುಂದೆ ವಸಂತ ಸಾಹಿತ್ಯೋತ್ಸವ ಎಂದು ಹೆಸರಾಗಿ, ಕಾಲಕ್ರಮದಲ್ಲಿ ವರ್ಷಋತುವಿನಲ್ಲಿ ನಡೆಯುವಂತಾಯಿತು!). ಪರಿಷತ್ಸದಸ್ಯ ಸಂಪತ್ತಿನ ಹೆಚ್ಚಳ, ಸರ್ಕಾರದ ವಾರ್ಷಿಕ ಅನುದಾನವನ್ನು ಹೆಚ್ಚಿಸಿದ್ದು — ಇದಿಷ್ಟು ಡಿ.ವಿ. ಗುಂಡಪ್ಪನವರ ಮುಖ್ಯ ಸಾಧನೆಗಳು. ಪ್ರತಿವಾರವೂ ಒಂದೋ ಎರಡೋ ಉಪನ್ಯಾಸ ಮುಂತಾದ ಕಾರ್ಯಕ್ರಮಗಳು ಇದ್ದೇ ಇರುತ್ತಿದ್ದುವು. ಎ.ಆರ್. ಕೃ., ಎಂ.ಆರ್.ಶ್ರೀ., ವಿ ಸೀ. ಇವರು ಡಿ.ವಿ.ಜಿ.ಗೆ ಬೆಂಬಲವಾಗಿದ್ದರು. ಪರಿಷತ್ಪತ್ರಿಕೆಗೆ ಡಿ. ವಿ. ಜಿ. ಮಾರ್ಗದರ್ಶನದಲ್ಲಿ ಎ. ಆರ್. ಕೃ. ಹೊಸ ಕಳೆ ತುಂಬಿದರು, ಪ್ರಬುದ್ಧ ಕರ್ನಾಟಕ ನಡೆಸಿದ ಅನುಭವವನ್ನೆಲ್ಲ ಪತ್ರಿಕೆಗೆ ಧಾರೆಯೆರೆದರು. ಈ ಮಹನೀಯರ ಸಹಾಯಕನಾಗಿ ಕೆಲಸ ಮಾಡುವ ಭಾಗ್ಯ ಈ ಲೇಖಕನಿಗೆ ದೊರೆಯಿತು. ಪರಿಷತ್ತಿನ ವಿಚಾರಕ್ಕೆ ಮೀಸಲಾಗಿದ್ದ "ಪರಿಷತ್ ಪತ್ರಿಕೆಯ ಸಂಗ್ರಹಪ್ರತಿ" ಎಂಬ ಹೆಸರಿನಿಂದ ಸದಸ್ಯರಿಗೆ ಕಳಿಸುವ ವ್ಯವಸ್ಥೆ ಡಿ. ವಿ. ಜಿ. ಅವರ ಕಲ್ಪನೆ. ಈ ಸಂಗ್ರಹಪ್ರತಿಯೇ "ಕನ್ನಡ ನುಡಿ"ಯ ಸ್ಥಾಪನೆಗೆ 'ಶ್ರೀ' ಯವರಿಗೆ ಸ್ಫೂರ್ತಿ ನೀಡಿತೋ ಏನೋ.

ಪರಿಷತ್ತಿನ ಬೆಳವಣಿಗೆಗೆ ಡಿ. ವಿ. ಜಿ. ಹೊಸ ತಿರುವು ಕೊಟ್ಟು ವ್ಯವಸ್ಥೆ ಮಾಡಿದ ಕಾರ್ಯಕ್ರಮಗಳು ಬೆಂಗಳೂರಿಗೆ ಮಾತ್ರ ಸೀಮಿತವಾಗಿದ್ದುವು. ಅವರ ಕಾಲದಲ್ಲಿ ಪರಿಷತ್ತಿನ ಪ್ರತಿಷ್ಠೆ ಹೆಚ್ಚಿದರೂ ಅದರ ಬಗ್ಗೆ ಉತ್ತರ ಕರ್ನಾಟಕದವರು ಅಷ್ಟೇನೂ ಅಕ್ಕರೆ ಆಸ್ಥೆ ಉಳ್ಳವರಾಗಿರಲಿಲ್ಲ. ವಾಸ್ತವವಾಗಿ, ಉತ್ತರ ಕರ್ನಾಟಕದವರು ಆಲೂರು ವೆಂಕಟರಾಯರ ಮುಖಂಡತ್ವದಲ್ಲಿ ಪರಿಷತ್ತಿನ ಶಾಖೆಯೊಂದು ಧಾರವಾಡದಲ್ಲಿ ಇರಬೇಕು ಎಂದು ಒತ್ತಾಯಮಾಡಿದಾಗ ಅದಕ್ಕೆ ತಮ್ಮ ಬೆಂಬಲ ಕೊಡಲಿಲ್ಲ. ಪರಿಷತ್ತು ಇಬ್ಭಾಗವಾಗುತ್ತದೆ ಎಂದು ಅವರು ಶಂಕೆ ಹೊಂದಿದ್ದರು.

ಕರ್ನಾಟಕ ಏಕೀಕರಣದ ಬಗೆಗೂ ಅವರ ನಿಲುವು (ಹಳೆಯ) ಮೈಸೂರಿನ ವಿಶಿಷ್ಟ ಪ್ರತ್ಯೇಕತೆಯನ್ನು ಉಳಿಸುಕೊಳ್ಳುವುದರ ಕಡೆಗೆ ಇದ್ದಿತು. ಹೀಗಿದ್ದೂ, ಬಿ. ಎಂ. ಶ್ರೀ. ಅವರ ಬಗೆಗೆ ಅವರ ಅಭಿಮಾನ, ಗೌರವ ಅಪಾರ. ಜಮಖಂಡಿಯ ಸಾಹಿತ್ಯ ಸಮ್ಮೇಳನದ ಸಮಯದಲ್ಲಿ ನಡೆದ ವಾರ್ಷಿಕಾಧಿವೇಶನದಲ್ಲಿ ಡಿ. ವಿ. ಜಿ. ಅವರು ಉಪಾಧ್ಯಕ್ಷರಾಗಿ ಮುಂದುವರಿಯುವುದು ತಮಗೆ ಇನ್ನು ಸಾಧ್ಯವಿಲ್ಲವೆಂದು ಸೂಚಿಸಿದಾಗ, ಬಿ. ಎಂ. ಶ್ರೀ. ಅವರ ಶಿಷ್ಯರೂ ಅಭಿಮಾನಿಗಳೂ 'ಶ್ರೀ'ಯವರ ಹೆಸರನ್ನು ಉಪಾಧ್ಯಕ್ಷ ಸ್ಥಾನಕ್ಕೆ ಸೂಚಿಸಿದರು. ಬಿ. ಎಂ. ಶ್ರೀ. ಸರ್ವಾನುಮತದಿಂದ ಪರಿಷತ್ತಿನ ಉಪಾಧ್ಯಕ್ಷರಾಗಿ ಆಯ್ಕೆಯಾದರು.

**ಉಪಾಧ್ಯಕ್ಷ ಬಿ. ಎಂ. ಶ್ರೀ.**

ಪರಿಷತ್ತಿನ ಉಪಾಧ್ಯಕ್ಷರಾಗಿ ಬಿ. ಎಂ. ಶ್ರೀ. ಪರಿಷತ್ತಿಗಾಗಿ, ಕನ್ನಡಕ್ಕಾಗಿ ಮಾಡಿದ ಸಾಧನೆಯ ಮಹತ್ವವನ್ನು ಅರಿಯಬೇಕಾದರೆ ಅವರಿಗಿಂತ ಹಿಂದೆ ಇದ್ದವರು ಸಾಧಿಸಿದ್ದು ಏನು, ಎಷ್ಟು, ಎನ್ನುವುದನ್ನು ತಿಳಿಯಬೇಕಾದದ್ದು ಅಗತ್ಯ ಎಂಬ ಅಭಿಪ್ರಾಯದಿಂದ "ಹಿನ್ನೆಲೆ"ಯನ್ನು ಸ್ವಲ್ಪ ವಿವರ ಪೂರ್ಣವಾಗಿ ಪರಿಚಯಮಾಡಿ ಕೊಡಬೇಕಾಯಿತು. ಶ್ರೀಯವರ ಮಾರ್ಗದರ್ಶನ, ಸ್ಫೂರ್ತಿ ಮತ್ತು ಪ್ರೇರಣೆಗಳಿಂದ ಅವರ ಅಧಿಕಾರಾವಧಿಯಲ್ಲಿ ನಡೆದ ಅತ್ಯಂತ ಪ್ರಮುಖ ಕಾರ್ಯಗಳನ್ನು ಮುಂದೆ ಒಕ್ಕಣಿಸಲಾಗುವುದು. ಈ ಅವಧಿಯಲ್ಲಿ ಮೈಸೂರಿನಿಂದ ಬೆಂಗಳೂರಿಗೆ ವರ್ಗವಾಗಿ, ಸೆಂಟ್ರಲ್ ಕಾಲೇಜಿನಲ್ಲಿ ಆಂಗ್ಲ ಭಾಷಾ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಆದ್ದರಿಂದ, ಅವರು ಡಿ. ವಿ. ಜಿ. ಅವರಂತೆ ಪ್ರತಿ ನಿತ್ಯಬಂದು ಪರಿಷತ್ತಿನಲ್ಲಿ ಕುಳಿತು ದಿನನಿತ್ಯದ ಕೆಲಸವನ್ನು ನೋಡಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಅದರ ಅಗತ್ಯವೂ ಇರಲಿಲ್ಲ. ಏಕೆಂದರೆ, ಡಿ. ವಿ. ಜಿ. ಅವರ ಕಾಲದಲ್ಲಿ ಕೆಲಸಮಾಡಿ ಅನುಭವಪಡೆದ ಕಚೇರಿ ಸಿಬ್ಬಂದಿ, ಹಾಗೂ ಗೌರವ ಪದಾಧಿಕಾರಿಗಳು ಬಿ. ಎಂ. ಶ್ರೀ. ಅವರ ನೆರವಿಗೆ ನಿಂತಿದ್ದರು. ಬಿ. ಎಂ ಶ್ರೀ

ದಿನ ನಿತ್ಯ ಕಚೇರಿಕೆಲಸವನ್ನು ಸಿಬ್ಬಂದಿ ನೋಡಿಕೊಳ್ಳಲು ಬಿಟ್ಟು, ಡಿ. ವಿ. ಜಿ. ಪ್ರಾರಂಭಿಸಿ ವ್ಯವಸ್ಥೆಗೊಳಿಸಿದ್ದ ಗಮಕ ಶಿಕ್ಷಣ ತರಗತಿ, ವಸಂತಸಾಹಿತ್ಯೋತ್ಸವಗಳನ್ನು ಮುಂದುವರಿಸಿದ್ದಲ್ಲದೆ, ಪರಿಷತ್ತಿನ ಕಾರ್ಯ ವ್ಯಾಪ್ತಿಯನ್ನು, ದೃಷ್ಟಿಯನ್ನು ಎದ್ದುಕಾಣುವಂತೆ ಮಾರ್ಪಡಿಸಿದರು. ಅವರು ಮಾಡಿದ ಮಾರ್ಪಾಡುಗಳನ್ನೂ ಪರಿಷತ್ತಿಗೆ ಹೊಸ ಚೇತನ ತಂದ ಮಹತ್ವದ ಕಾರ್ಯಗಳನ್ನೂ ಈ ಮುಂದೆ ಬಹಳ ಸಂಕ್ಷೇಪವಾಗಿ ವಿವರಿಸಿದೆ. 

೧. **ಪರಿಷತ್ತಿನ ಹೆಸರಿನ ಮಾರ್ಪಾಟು**- ಪರಿಷತ್ತು ಸ್ಥಾಪನೆ ಆದಂದಿನಿಂದ ಅದರ ನಿಯಮಾವಳಿಯಲ್ಲಿ ಘೋಷಿತವಾಗಿ, ಅದರ ಎಲ್ಲ ಪ್ರಕಟನೆ ಪತ್ರಶಿರೋಲೇಖ (Letter – head) ಗಳಲ್ಲಿ ಕಾಣುತ್ತಿದ್ದದು **"ಕರ್ಣಾಟಕ"** ಸಾಹಿತ್ಯ ಪರಿಷತ್ತು, ಎಂದು. ಎ. ಆರ್. ಕೃ. ಅವರು ಮೈಸೂರಿಗೆ ವರ್ಗವಾಗಿ, ಅವರ ಸಂಪಾದಕತ್ವದಲ್ಲಿ ಹೊರಬರುತ್ತಿದ್ದ ಪರಿಷತ್ಪತ್ರಿಕೆಯನ್ನು ಸಂಪಾದಕರ ಪರವಾಗಿ ನಿರ್ವಹಿಸುವ ಪೂರ್ಣ ಹೊಣೆಗಾರಿಕೆ ನನ್ನ ಮೇಲೆ ಬಿದ್ದಿತು. ೧೯೩೮ರ ಪ್ರಥಮ ಸಂಚಿಕೆಯ ಮುಖಪುಟವನ್ನೂ ಹೊದಿಕೆಪುಟವನ್ನೂ ಮುದ್ರಿಸುವ ಸಂದರ್ಭದಲ್ಲಿ ಬಿ. ಎಂ. ಶ್ರೀ. ನಮಗೆ ಎಂ. ಎ. ತರಗತಿಗಳಲ್ಲಿ ಪಾಠ ಮಾಡುವಾಗ, ಕನ್ನಡ- ಕರ್ಣಾಟಕ- ಕರ್ನಾಟಕ ಶಬ್ದರೂಪಗಳ ಬಗೆಗೆ ಅತ್ಯಂತ ವಿಚಾರಪೂರ್ಣವಾಗಿ - ಐತಿಹಾಸಿಕ ದೃಷ್ಟಿಯಿಂದ, ಭಾಷಾಶಾಸ್ತ್ರ ದೃಷ್ಟಿಯಿಂದ, **ಕರ್ನಾಟಕ** ರೂಪವೇ ಸಾಧು ಎಂದು ಸಾಧಿಸಿ ತೋರಿಸಿದ್ದರು. ಇದು ನೆನಸಿಗೆ ಬಂದು, ಒಂದು ಅಕ್ಷರವನ್ನು ತಿದ್ದುವುದು ಒಂದು ಸಣ್ಣ ಬದಲಾವಣೆ ಎಂದು ತೋರಿದರೂ ಉಪಾಧ್ಯಕ್ಷರ ಗಮನಕ್ಕೆ ತರುವುದು ಒಳ್ಳೆಯದು ಎಂದು ಭಾವಿಸಿ ಹೊದಿಕೆಪುಟವನ್ನು ಬಿ. ಎಂ. ಶ್ರೀ. ಅವರಿಗೆ ಕಳಿಸಿಕೊಟ್ಟೆನು. ಅವರು ಬದಲಾವಣೆಯನ್ನು ಗಮನಿಸಿ, **BMS** ಎಂದು ತಮ್ಮ ಸಂಕ್ಷಿಪ್ತ ಸಹಿಯನ್ನು ಹಾಕುವ ಮೂಲಕ ಅದನ್ನು ಒಪ್ಪಿ ಹಿಂದಿರುಗಿಸಿದರು. ಈ ಬದಲಾವಣೆ ಅವರಿಗೆ ಸರಿಕಂಡದ್ದರಿಂದಲೇ

ಅದುಆದ ತರುಣದಲ್ಲಿ ಒಂದ ವಸಂತ ಸಾಹಿತ್ಯೋತ್ಸವ ಸಂದರ್ಭ ದಲ್ಲಿ ಪರಿಷತ್ತಿನ ಕಟ್ಟಡದ ಮುಖಮಂಟಪದ ಮೇಲೆ ರಾತ್ರಿಯ ವೇಳೆಯೂ ಚೆನ್ನಾಗಿ ಪರಿಷತ್ತಿನ ಹೆಸರು ಎಲ್ಲರ ಕಣ್ಣಿಗೂ ಬೀಳಲಿ ಎಂಬ ಘನ ಉದ್ದೇಶದಿಂದ 'ಬಳ್ಳಿ ಬೆಳಕಿನ' (ನಿಯಾನ್ ಅಕ್ಷರಗಳುಳ್ಳ ನಾಮಫಲಕವನ್ನು ಸುಮಾರು 350 ರೂಪಾಯಿ ಮುಟ್ಟಿಸಿ ಸ್ವಂತ ವೆಚ್ಚದಿಂದ ಮಾಡಿಸಿದರು. ಪ್ರೊ || ಎ. ಎನ್. ಮೂರ್ತಿರಾಯರು 'ಬಿ. ಎಂ. ಶ್ರೀಕಂಠಯ್ಯ' ಎಂಬ ತಮ್ಮ ಪುಸ್ತಕದಲ್ಲಿ ಸೂಚಿಸಿರುವಂತೆ — "ಕರ್ಣಾಟಕ ಸಾಹಿತ್ಯ ಪರಿಷತ್ತು ಎಂಬ ಹೆಸರನ್ನು ನಿಯಾನ್ ಅಕ್ಷರಗಳಲ್ಲಿ ಪ್ರದರ್ಶಿಸುವ ಆನು ಕೂಲಕ್ಕಾಗಿ ಶ್ರೀಕಂಠಯ್ಯನವರು 'ಕರ್ಣಾಟಕ' ಎಂಬ ಪದದಲ್ಲಿ ರುವ 'ಟ' ವರ್ಗದ ಪಂಚಮಾಕ್ಷರಕ್ಕೆ ಬದಲಾಗಿ 'ತ' ವರ್ಗದ ಪಂಚಮಾಕ್ಷರವನ್ನು ಉಪಯೋಗಿಸಲು ಪ್ರಯತ್ನಿಸಿದ್ದು" ಸಂಸ್ಕೃತ ಪಕ್ಷಪಾತಿಗಳ ವಿರೋಧವನ್ನು ಕಟ್ಟಿಕೊಳ್ಳಲು ನಿಜವಾದ ಕಾರಣವಲ್ಲ. ಏಕೆಂದರೆ, ನಿಯಾನ್ ಅಕ್ಷರಫಲಕ ನಿರ್ಮಾಪಕನಿಗೆ 'ಕರ್ಣಾಟಕ' ದಲ್ಲಿಯ 'ಟ' ಕಾರ ನಿರ್ಮಿಸುವುದು ಸಾಧ್ಯವಾದರೆ ಆ ಅಕ್ಷರದ ತಲೆಕೆಳಗು ರೂಪದ 'ಣ'ಕಾರವೂ ಅಷ್ಟೇ ಸಾಧ್ಯ. ಶ್ರೀಯುತರಿಗೆ ಮಾತ್ರ ಏಕೆ-ಯಾರಿಗೂ ಈ ವರೆಗೆ ತಿಳಿಯದಿದ್ದ, ತಿಳಿಯಲು ಸಾಧ್ಯವಾಗದಿದ್ದ, ತೆರೆಮರೆಯ ವಿದ್ಯಮಾನ ಮಾರ್ಪಾಟಿಗೆ ಮುಖ್ಯಪ್ರೇರಕ. ನಾಮಫಲಕ ನಿರ್ಮಾಣವಷ್ಟೇ ಪ್ರೇರಕ ಆಗಿದ್ದರೆ ಪ್ರತಿಭಟನೆಯ ನಾಯಕರಾಗಿದ್ದ ಬೆಳ್ಳಾವೆ ವೆಂಕಟನಾರಾಣಯಪ್ಪ ನವರು ಬಹುಶಃ ಸುಮ್ಮನಿದ್ದು ಬಿಡುತ್ತಿದ್ದರು. ಬೆಳ್ಳಾವೆ ಯವರು ಕೆರಳಿದ್ದು ಪರಿಷತ್ ಪತ್ರಿಕೆಯ ಹೆಸರಿನಲ್ಲಾದ ಬದಲಾವಣೆಯನ್ನು ಕಂಡು. ಮುಂದೆ ಈ ಸಂಬಂಧದಲ್ಲಿ ಎದ್ದ ಬಿರುಗಾಳಿ, ಪರಿಣಾಮವಾಗಿ ಬಳ್ಳಾರಿಯ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ನಡೆದ ಸರ್ವ ಸದಸ್ಯರ ವಾರ್ಷಿಕಾಧಿವೇಶನದಲ್ಲಿ ಬಹು ಮತದಿಂದ "ಕನ್ನಡ ಸಾಹಿತ್ಯ ಪರಿಷತ್ತು" ಎಂದು ಅಂಗೀಕೃತ ವಾದನ್ನು, ಎಲ್ಲರೂ ಬಲ್ಲ ವಿಷಯವಾದ್ದರಿಂದ ಅದನ್ನು ಇಲ್ಲಿ

ಬೆಳಸುವ ಗೋಜಿಗೆ ಹೋಗುವುದಿಲ್ಲ. ಈ ಸಂಗತಿಗಳಿಗಿಂತ ಹೆಚ್ಚಾಗಿ ಇವು ಬಿ. ಎಂ. ಶ್ರೀ. ಅವರ ಹಾಗು ಬೆಳ್ಳಾವೆ ಅವರ ಮೇಲೆ ಹೇಗೆ ಬೆಳಕು ಚೆಲ್ಲಿ, ಅವರ ವ್ಯಕ್ತಿತ್ವದ ಘನತೆಯನ್ನು ಹೆಚ್ಚಿಸುತ್ತವೆ ಎನ್ನುವುದನ್ನು ನಾವು ಗಮನಿಸಬೇಕು. "ಅಕ್ಷರ ಬದಲಾವಣೆ ನಾನು ಮಾಡಿದ್ದಲ್ಲ, ಸಿಬ್ಬಂದಿ ಮಾಡಿದ್ದು" ಎಂದು ಹೇಳಿ "ಶ್ರೀ"ಯವರು ಇಕ್ಕಟಿನಿಂದ ಪಾರಾಗಬಹುದಾಗಿತ್ತು. ಅವರು ಹಾಗೆ ಮಾಡಲಿಲ್ಲ. ಈ ಸಂಗತಿಯನ್ನು ನಾನು ಬಹಿರಂಗ ಪಡಿಸದೆ ಹೋಗಿದ್ದರೆ ಅದು ಅಜ್ಞಾತವಾಗಿಯೇ ಉಳಿದಿರುತ್ತಿತ್ತು. ತಮ್ಮ ಗುರುಗಳಾಗಿದ್ದ ಬೆಳ್ಳಾವೆಯವರ ಆರೋಪ ಆಕ್ಷೇಪಗಳಿಗೆ ತಮ್ಮ ತಲೆ ಕೊಟ್ಟು ಅವರೊಂದಿಗೆ ಸಾರ್ವಜನಿಕ ವಾಗ್ಯುದ್ಧಕ್ಕೆ ನಿಂತರು. ಈ ವಾಗ್ಯುದ್ಧ ನಡೆಯುತ್ತಿದ್ದ ವೇಳೆಯಲ್ಲಿಯೇ ಅದೇ ಕಟ್ಟಡದ ಬೇರೊಂದೆಡೆ ನಡೆಯುತ್ತಿದ್ದ ಇಂಗ್ಲಿಷ್ - ಕನ್ನಡ ನಿಘಂಟು ಸಂಪಾದಕ ಮಂಡಲಿಯ ಸಭೆಗಳಲ್ಲಿ ಹಾಜರಿರುತ್ತಿದ್ದು ಬೆಳ್ಳಾವೆಯವರೊಂದಿಗೆ ನಿಘಂಟು ರಚನೆಯಲ್ಲಿ ಕ್ರಮಬದ್ಧವಾಗಿ ನಗುನಗುತ್ತ ಸಹಕರಿಸುತ್ತಿದ್ದರು, ಅವರು ಮನೆಯಲ್ಲಿ ಮಾಡಿಸಿ ತರಿಸುತ್ತಿದ್ದ ಉಪಾಹಾರವನ್ನು ಸಂತೋಷದಿಂದ ಸ್ವೀಕರಿಸುತ್ತಿದ್ದರು.

೨) **ಗ್ರಂಥಪ್ರಕಟನೆ :** ಪಂಪಭಾರತದ ಪರಿಷ್ಕರಣ ಕಾರ್ಯವಲ್ಲಿ ಬಿ. ಎಂ. ಶ್ರೀ. ಅವರ ಕೈವಾಡ ಗಮನಾರ್ಹವಾಗಿತ್ತು. ಇದು ಅವರು ಉಪಾಧ್ಯಕ್ಷರಾಗಿಲ್ಲದಿದ್ದ ತತ್ಪೂರ್ವದಲ್ಲಿ ನಡೆದದ್ದು. ಆಗಿನ ದಿನಗಳಲ್ಲಿ ಪರಿಷತ್ತು ಪ್ರಾಚೀನ ಹಸ್ತಪ್ರತಿಗಳ ಸಂಗ್ರಹಣ ಪ್ರಕಟನೆಗಳಿಗೆ ವಿಶೇಷ ಗಮನವಿತ್ತಿರಲಿಲ್ಲ. ಅದರ ಭಂಡಾರದಲ್ಲಿ ಹೇಳಿಕೊಳ್ಳುವಂತಹ ಹಸ್ತಪ್ರತಿಗಳೂ ಇರಲಿಲ್ಲ. ಅಲ್ಲದೆ, ಈ ಕಾರ್ಯಕ್ಕಾಗಿಯೇ ಶ್ರಮಿಸುತ್ತಿದ್ದ ಓರಿಯಂಟಲ್ ಲೈಬ್ರರಿ ಇತ್ತು. ಆದ್ದರಿಂದ ಓದುಬಲ್ಲ ಜನಸಾಮಾನ್ಯಕ್ಕೆ ಪ್ರಾಚೀನ ಕಾಲದಿಂದ ಹಿಡಿದು ಆಧುನಿಕ ಕಾಲದವರಗೆ ಕನ್ನಡ ನಾಡಿನ ಸಾಹಿತ್ಯದ, ಕಲೆಗಳ ಮತ್ತು ಇತಿಹಾಸದ ಪರಿಚಯವನ್ನು ಮಾಡಿ

ಕೊಡುವುದಕ್ಕಾಗಿ "ಕನ್ನಡ ಬಾವುಟ", "ಕನ್ನಡ ನಾಡಿನ ಚರಿತ್ರೆ" (ಮೂರು ಭಾಗಗಳು)ಗಳನ್ನು ಸಿದ್ಧಪಡಿಸಿ ಪ್ರಕಟಿಸಿದರು. "ಕನ್ನಡ ಬಾವುಟ" ಅನೇಕ ಮುದ್ರಣಗಳನ್ನು ಕಂಡಿರುವುದು ಅದರ ಜನಪ್ರಿಯತೆಗೆ ಸಾಕ್ಷಿ.

೩) **ಕನ್ನಡ ಬಾವುಟ** : ಕನ್ನಡ ಬಾವುಟದ ಕಲ್ಪನೆ ಪೂರ್ತಿಯಾಗಿ "ಶ್ರೀ" ಅವರದು. ಈ ಕಲ್ಪನೆಯು ಭಾವನಾತ್ಮಕ ಪ್ರತೀಕವಾಗಿ ಕನ್ನಡ ನಾಡಿನ ಭೂಪಟವನ್ನು ಒಳಗೊಂಡಂತೆ ರೇಶಿಮೆ ಬಟ್ಟೆಯಲ್ಲಿ ಒಂದು ಬಾವುಟವನ್ನು ಹೊಲಿಯಿಸಿ ವಸಂತ ಸಾಹಿತ್ಯೋತ್ಸವದಂದು ಮೈಸೂರಿನ ಧ್ವಜದೊಂದಿಗೆ ಅದನು ಪರಿಷನ್ಮಂದಿರದ ಮೇಲೆ ಏರಿಸಿದ್ದರು. ಆ ಸಂದರ್ಭದಲ್ಲಿ ಪ್ರಕಟವಾದ "ಕನ್ನಡಬಾವುಟ" ಪುಸ್ತಕದ ಮೇಲೆ ಅಚ್ಚಾಗಿರುವ ಬಾವುಟದ ಚಿತ್ರ ಬಟ್ಟೆಯು ಬಾವುಟದ ಚಿತ್ರವೇ ಆಗಿದೆ. ಕನ್ನಡ ನಾಡಿನ ಭೂಪಟವನ್ನು ಒಳಗೊಂಡ ಪರಿಷತ್ತಿನ ಲಾಂಛನ ಒಂದು ನೊತ್ತ ಮೊದಲಿಗೆ ಕಲ್ಪಿತವಾದದ್ದು ಶ್ರೀಯವರ ಸ್ಫೂರ್ತಿಯಿಂದಲೇ.

೪) ಪರಿಷತ್ತಿನ ಮುಖ ಪತ್ರಿಕೆಯಾಗಿ ಒಂದು ಪಾರ ಪತ್ರಿಕೆಯ ಅಗತ್ಯವನ್ನು ಕಂಡುಕೊಂಡು, "ಕನ್ನಡ ನುಡಿಯನ್ನು" ಪ್ರಾರಂಭಿಸಿದ್ದೂ ಶ್ರೀಯವರೇ. ಆ ವೇಳೆಗಾಗಲೇ ಸಾಹಿತ್ಯ ಲೋಕದಲ್ಲಿ ಖ್ಯಾತನಾಮರಾಗಿದ್ದ ಅ. ನ. ಕೃಷ್ಣರಾಯರನ್ನು ಅದರ ಪ್ರಥಮ ಸಂಪಾದಕರಾಗಿ ನೇಮಿಸಿದವರೂ ಅವರೇ. "ಕನ್ನಡ ನುಡಿ"ಯಲ್ಲಿ ಪರಿಷತ್ತಿನ ಸುದ್ದಿ ಮತ್ತು ಕನ್ನಡ ಸುದ್ದಿ ಪ್ರಕಟವಾಗಬೇಕು, ಕನ್ನಡ ಸಾಹಿತ್ಯ ಮತ್ತು ಭಾಷೆಗೆ ಸಂಬಂಧಪಟ್ಟಂತೆ ಸಮಕಾಲೀನ ವಿದ್ಯಮಾನಗಳ ಬಗೆಗೆ ಉದ್ಬೋಧಕವಾದ ಸಂಪಾದಕೀಯ ಲೇಖನ ಇರಬೇಕು, ಕನ್ನಡ ಸಾಹಿತ್ಯ ಮತ್ತು ಭಾಷೆಗೆ ಸಂಬಂಧಪಟ್ಟಂತೆ ವಿಚಾರ ಪೂರ್ಣ ಲೇಖನಗಳೂ ಇರಬೇಕು, ಒಟ್ಟಿನಲ್ಲಿ "ಕನ್ನಡ ನುಡಿ" ಕರ್ನಾಟಕದ ಗೆಜೆಟಿಯರ್ ಆಗಬೇಕು– ಇದು "ಶ್ರೀ" ಯವರು ಕನ್ನಡ ನುಡಿಯನ್ನು ಹೊರಡಿಸಿದ್ದರ ಮುಖ್ಯ ಆಶಯ. ಅನೇಕ ಅವಸ್ಥಾಂತರಗಳನ್ನು ದಾಟ

ಈಗಿನ ರೂಪದಲ್ಲಿ ಉಳಿದು ಬಂದಿರುವ 'ಕನ್ನಡ ನುಡಿ'ಯ ಬೆಳವಣಿಗೆಯ ಚಿತ್ರವನ್ನು ಮುಂದಿಡಲು ಪ್ರತ್ಯೇಕ ಲೇಖನವೇ ಆಗಬೇಕು.

5) ಬಿ. ಎಂ. ಶ್ರೀಯವರು ಪ್ರಾರಂಭಿಸಿ ಇಂದಿಗೂ ನಡೆದುಕೊಂಡು ಬರುತ್ತಿರುವ ಒಂದು ಮಹತ್ವದ ವ್ಯವಸ್ಥೆ, "ಕನ್ನಡ ಸಾಹಿತ್ಯ ಪರೀಕ್ಷೆಗಳು". ಅಣುಗ, ಕಾವ, ಜಾಣ ಎಂಬ ಮೂರು ಹಂತಗಳ ಈ ವ್ಯವಸ್ಥೆಯಲ್ಲಿ ಈಗ ಅಣುಗ ಇಲ್ಲ, 'ರತ್ನ' ಎಂಬ ಉನ್ನತ ಮಟ್ಟದ ಪರೀಕ್ಷೆ ಸೇರಿಕೊಂಡಿದೆ. (ಕನ್ನಡೇತರರಿಗೂ ಕನ್ನಡಿಗರಾದ ವಯಸ್ಕ ಅನಕ್ಷರಸ್ಥರಿಗೂ ಪ್ರಯೋಜನವಾಗುವಂತೆ "ಅಣುಗ" ಪರೀಕ್ಷೆಯನ್ನು ಮತ್ತೆ ಪ್ರಾರಂಭಿಸುವ ವಿಚಾರ ಪರಿಶೀಲನಾರ್ಹ).

6) ಕನ್ನಡ ಮಕ್ಕಳೂ, ಕನ್ನಡೇತರರೂ ಅನಕ್ಷರಸ್ಥರಾದ ವಯಸ್ಕರೂ ಕನ್ನಡ ಕಲಿಯುವ ಮೊದಲ ಹಂತದಲ್ಲಿ ಒತ್ತಕ್ಷರಗಳು ಒಂದು ದೊಡ್ಡ ಅಡಚಣೆ. ಒತ್ತಕ್ಷರಗಳನ್ನು ನಿವಾರಿಸುವುದರಿಂದ ಬೆರಳಚ್ಚು ಯಂತ್ರದ ವೇಗವರ್ಧನೆಗೂ ಅಚ್ಚುಕೂಟಕ್ಕೂ ಬಹಳ ಸಹಕಾರಿ. ದೀರ್ಘಸ್ವರಕ್ಕೆಲ್ಲಾ ಒಂದೇ ಚಿಹ್ನೆ ಇರಬೇಕು. ಈ ಸುಧಾರಣೆಗಳು ಬಿ. ಎಂ. ಶ್ರೀ. ಯವರು ಏರ್ಪಡಿಸಿದ್ದ ಕನ್ನಡ ಅಕ್ಷರ ಸಂಸ್ಕರಣ ಸಮ್ಮೇಳನದ ಫಲಿತಾಂಶಗಳು. ನಮ್ಮ ಜನ ಆ ಸುಧಾರಣೆಗೆ ಮನಸ್ಸು ಕೊಡದಿರುವುದು ಪ್ರಗತಿಯ ಚಿಹ್ನೆಯಲ್ಲ. ಲಿಪಿಸುಧಾರಣೆಯ ಆಶಯ ಕ್ರಾಂತಿಕಾರಕವಾದದಷ್ಟು, ಜನಹಿತ ಸಾಧಕವಾದದ್ದು, ಪ್ರಗತಿಪರವಾದದ್ದು; "ಶ್ರೀ" ಅವರ ದೂರ ದೃಷ್ಟಿಗೆ ನಿಚ್ಚಳ ನಿದರ್ಶನ.

7) ಬಿ. ಎಂ. ಶ್ರೀ. ಯವರು ಉಪಾಧ್ಯಕ್ಷರಾಗುವ ವೇಳೆಗೆ ಹಲವು ಕರ್ನಾಟಕ, ಕನ್ನಡ, ಸಂಘಗಳು ಹುಟ್ಟಿ ಕೆಲಸ ಮಾಡುತ್ತಿದ್ದವು. ಬೆಂಗಳೂರು ಸೆಂಟ್ರಲ್ ಕಾಲೇಜಿನ, ಮಹಾರಾಜರವರ ಕಾಲೇಜಿನ, ಅಧ್ಯಕ್ಷರೂ ಆಗಿದ್ದ ಅವರು ಕರೆದಲ್ಲೆಲ್ಲಾ ಹೋಗಿ ಕನ್ನಡ ಸಂಘಗಳನ್ನು ಹುಟ್ಟು ಹಾಕಿದರು. ಈ ಸಂಘಗಳ ಪ್ರತಿನಿಧಿಗಳೂ ಕಾರ್ಯಕರ್ತರೂ

ಒಂದುಕಡೆ ಸೇರಿ ಕನ್ನಡದ ಏಳಿಗೆಗೆ ಒಂದು ಸುಸಂಘಟಿತ ಕಾರ್ಯ
ಕ್ರಮವನ್ನು ರೂಪಿಸಿಕೊಳ್ಳುವುದು ಪ್ರಯೋಜನಕರ ಎಂದು ಭಾವಿ
ಪ್ರಪ್ರಥಮವಾಗಿ ಕನ್ನಡ ಸಂಘಗಳ ಸಮ್ಮೇಳನವನ್ನು ಏರ್ಪಡಿಸಿದರು.
ಕಾಲದಲ್ಲಿ ಕನ್ನಡ ಸಂಘಗಳು ಪರಿಷತ್ತಿನ ಅಂಗಸಂಸ್ಥೆಗಳಾಗಿ ಸೇರ
ಪರಿಷತ್ತಿನ ಕೆಲಸಕ್ಕೆ ಪೂರಕವಾಗಿ ಕೆಲಸ ಮಾಡತೊಡಗಿದವು.

8) ಈಗ ಮಹಿಳೆಯರು ಸಾಹಿತ್ಯ ಪ್ರಪಂಚದಲ್ಲಿ ಒಂದು ಗಣ್ಯಸ್ಥಾ
ಪಡೆದಿದ್ದಾರೆ. ಲೇಖಕಿಯರ ಸಂಘವೇ ಅಸ್ತಿತ್ವಕ್ಕೆ ಬಂದಿದೆ.
ಬೆಳವಣಿಗೆಗೆ "ಶ್ರೀ" ಕಾರ ಹಾಕಿದವರೂ ಶ್ರೀಯವರೇ. ಅವರ ಕಾಲದಲ್ಲಿ
ಪರಿಷತ್ತಿನ ಮಹಿಳಾ ಶಾಖೆ ಒಂದು ಪ್ರಾರಂಭವಾಗಿ, ಸಮ್ಮೇಳನಗಳ
ಮಹಿಳಾ ಗೋಷ್ಠಿ ಏರ್ಪಡಿಸುವುದಕ್ಕೂ ಅದು ದಾರಿ ಮಾಡಿಕೊಟ್ಟಿತು
ಮಹಿಳೆಯರ ಜೊತೆಯಲ್ಲೇ ಮಕ್ಕಳ ಕೂಟಗಳನ್ನೂ ನಡಸಬೇಕೆಂಬುದ
ಶ್ರೀಯವರ ಆಸೆ ಆಗಿತ್ತು.

9) ಪ್ರಾರಂಭವಾಗಿ ದೀರ್ಘ ಕಾಲ ನಡೆಯದೇ ಹೋದ ಇನ್ನೊಂದು
ಉಪಯುಕ್ತವಾದ ಕಾರ್ಯಕ್ರಮ, ಆಸಕ್ತಿಯುಳ್ಳವರಿಗೆ ತಮಿಳ
ಕಲಿಯುವ ಅವಕಾಶ. ಪಿ. ಎಂ. ಸೋಮಸುಂದರಂ ಪಿಳ್ಳೈ ಅವರೂ
ಎಸ್. ಕುದ್ರಪತಿ ಅವರೂ ಕೆಲವು ಕಾಲ ಈ ತಮಿಳು ತರಗತಿಗಳನ್ನು
ನಡೆಸಿದರು. (ಈ ಲೇಖಕನೂ ತರಗತಿಗ ಪ್ರಯೋಜನ ಪಡೆ
ಅರೆಕಲಿಕೆಯ ವಿದ್ಯಾರ್ಥಿಗಳಲ್ಲಿ ಒಬ್ಬ !)

10) ಪರಿಷತ್ತಿನ ಕಾರ್ಯವ್ಯಾಪ್ತಿಯನ್ನು ವಿಕೇಂದ್ರೀಕರಣಗೊಳಿಸಿ ಅಖಿ
ಕರ್ನಾಟಕಕ್ಕೆ ವಿಸ್ತರಿಸಿದ್ದು ಈ ಮೊದಲು ಆಲೂರ ವೆಂಕಟರಾಯರ
ಬಯಸಿದ್ದಕ್ಕಿಂತ ಬಹಳ ಮುಂದೆ ಹೋಯಿತು. ಅವರ ಬಯಕೆ ಈಡೇರಿದ್ದ
ಅದೊಂದು ಧಾರವಾಡದ ಸಂಸ್ಥೆಯಾಗಿ ಉಳಿಯುವ ಸಂಭವವೇ
ಹೆಚ್ಚಾಗಿತ್ತು. ಬಿ. ಎಂ. ಶ್ರೀ. ಅವರು ಪ್ರಾರಂಭಿಸಿದ ನಾಲ್ಕು ಪ್ರಾಂ

ಮಿತಿಗಳು (ಮೈಸೂರು ಕರ್ನಾಟಕ ಸಮಿತಿ, ಉತ್ತರ ಕರ್ನಾಟಕ ಸಮಿತಿ, ಂಗಳೂರು ಕರ್ನಾಟಕ-ಕೊಡಗು ಸಮಿತಿ, ಹೈದರಾಬಾದು ಕರ್ನಾಟಕ ಮಿತಿ) ನಿಯಮಾನುಸಾರ ಸಮಿತಿ ಸ್ವಾಯತ್ತವಾಗಿದ್ದುವು.

1) **ಜಿಲ್ಲಾ ಸಮಿತಿಗಳ ಕಲ್ಪನೆ :** ಹಿಂದಿನ ಪರಿಷತ್ತಿನ ಅಧ್ಯಕ್ಷರಾದ ್ರೀ ಜಿ. ನಾರಾಯಣ ಅವರ ಕಾಲದಲ್ಲಿ ಮೊತ್ತ ಮೊದಲಿಗೆ ಅಸ್ತಿತ್ವಕ್ಕೆ ಂದು ಈಗಲೂ ಪರಿಷತ್ತಿನ ಕಾರ್ಯಕಲಾಪಗಳಿಗೆ ಅಖಿಲ ಕರ್ನಾಟಕ ್ಯಾಪ್ತಿಯ ವಿಸ್ತಾರವನ್ನು ಒದಗಿಸುತ್ತಿರುವ ಜಿಲ್ಲಾ ಸಮಿತಿಗಳ ್ಯವಸ್ಥೆಯ ಕನಸನ್ನು 'ಶ್ರೀ' ಯವರು ಕಟ್ಟಿಕೊಂಡಿದ್ದ ಸಂಗತಿ ಿಸ್ಮೃತಿಯ ಗರ್ಭದಲ್ಲಿ ಅಡಗಿಹೋಗಿದೆ. ಕನ್ನಡ ನುಡಿಯ ಮೊದಲ ಂಪುಟಗಳ ಪುಟಗಳನ್ನು ತಿರುವಿಹಾಕಿದರೆ ಅದು ನೆನಪಿನಲ್ಲಿ ಸುಳಿಯುತ್ತದೆ. ಅವರ ಮಾತುಗಳು ಇವು.

"ಕನ್ನಡ ನಾಡಿನಲ್ಲಿ ಜಿಲ್ಲಾ ಸಾಹಿತ್ಯ ಸಮ್ಮೇಳನಗಳು ಆಗಾಗ್ಗೆ ಅಲ್ಲಲ್ಲಿ ಹಲವು ವರ್ಷಗಳಿಂದ ನಡೆಯುತ್ತಿವೆ. ಮತ್ತು ಈಚೆಗೆ ಪರಿಷತ್ತಿನ ಪ್ರಾಂತ ಸಮಿತಿಗಳು ಈ ಬಗ್ಗೆ ಸಹಕರಿಸುತ್ತಿವೆ. ಪ್ರತಿಯೊಂದು ಜಿಲ್ಲೆಗೂ ಸಮಿತಿ ಏರ್ಪಟ್ಟರೆ ಜಿಲ್ಲೆಜಿಲ್ಲೆಗಳಲ್ಲಿ ಪರಿಷತ್ತಿನ ಕಾರ್ಯಗಳು, ನಾಡಿನ ಪುನರುಜ್ಜೀವನದ ಸಾಧನಗಳು ಹೆಚ್ಚುವುವೆಂದು ಜನತೆಯಲ್ಲಿ ಹೆಚ್ಚು ನಂಬಿಕೆಯಾಗುತ್ತಿದೆ. ಈಗಾಗಲೇ ಕೆಲವು ಜಿಲ್ಲೆಗಳ ಮುಂದಾಳುಗಳು ಜಿಲ್ಲಾ ಸಮಿತಿಗಳನ್ನು ಏರ್ಪಡಿಸಿ ತಮ್ಮ ನಿಷ್ಟಿನ ಕನ್ನಡದ ಮುನ್ನಡೆಯನ್ನು ಹೆಚ್ಚು ಆಸಕ್ತಿಯಿಂದ ಕೈಕೊಂಡಿದ್ದಾರೆ. ತಮ್ಮ ಜಿಲ್ಲೆಗಳಲ್ಲಿ ಪ್ರತಿವರ್ಷವೂ ತಪ್ಪದೆ ಒಂದು ಸಮ್ಮೇಳನ ನಡಸುವುದಕ್ಕೂ ಅಲ್ಲಿ ಆಯಾ ಜಿಲ್ಲೆಗೆ ಮತ್ತು ಇಡಿಯ ಕನ್ನಡ ನಾಡಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಚರ್ಚಿಸಿ ಗೊತ್ತುವಳಿಗಳನ್ನು ಮಾಡುವುದಕ್ಕೂ ಆ ಗೊತ್ತುವಳಿಗಳನ್ನು ಕಾರ್ಯರೂಪಕ್ಕೆ ತರುವುದಕ್ಕೂ ಒಂದು ಸ್ಥಳೀಯ ಸಂಸ್ಥೆ ಸಿದ್ಧವಾಗುತ್ತದೆ."

"ಕನ್ನಡ ನುಡಿಯು ತಮ್ಮ ಸಂಪಾದಕೀಯದಲ್ಲಿ (೫-೨೯-
ಮೇಲಿನ ಮಾತನ್ನು ಹೇಳಿ, ಈ ಜಿಲ್ಲಾ ಸಮಿತಿಗಳಿಗೆ ಸಪ್ತ ಕಾ
ಸೂತ್ರಗಳನ್ನು ವಿವರಿಸಿ, ತಮ್ಮ ಮಾತನ್ನು ಹೀಗೆ ಮುಗಿಸಿದರು

"ಈ ಸಮಿತಿಗಳು ಬೆಳೆದು ಬಂದು ಕಾರ್ಯಗತವಾದರೆ, ಪರಿಷ
ಅಂಗರಚನೆಯಲ್ಲಿ ಇವಕ್ಕೆ ಸ್ಥಾನವನ್ನೂ ನಿಯಮಗಳನ್ನೂ ಕ
ಬಹುದು. ಸದ್ಯಕ್ಕೆ ಆಯಾ ಪ್ರಾಂತ ಸಮಿತಿಗಳೊಡನೆ
ಸಂಬಂಧವನ್ನಿಟ್ಟುಕೊಳ್ಳಬಹುದು."

ಜಿಲ್ಲಾ ಸಮಿತಿಗಳಿಗೆ ಸಂಬಂಧಪಟ್ಟಂತೆ ಹೇಳುವುದಾದರೆ, ಬಿ. ಎಂ. ಶ್ರೀ
ಅವರ ಕನಸನ್ನು ನನಸಾಗಿ ಮಾಡುವಲ್ಲಿ ಹಿಂದಿನ ಅಧ್ಯಕ್ಷರಾದ ಶ್ರೀ
ನಾರಾಯಣ ಹಾಗೂ ಇಂದಿನ ಅಧ್ಯಕ್ಷರು ಶ್ರೀ ಹಂಪ.ನಾ. ಯ
ಯಾಗಿದ್ದಾರೆ.

12. **ಪರಿಷತ್ತಿಗೆ ಶ್ರೀಯವರ ದಾನ**: ಪರಿಷತ್ತಿನ ಪ್ರಕಟನೆಗಳ
ಕನ್ನಡ ನುಡಿ, ಪರಿಷತ್ ಪತ್ರಿಕೆ, ಮತ್ತು ಇತರ ಗ್ರಂಥಪ್ರಕಟನೆಗಳ
ಪರಿಷತ್ತಿನಲ್ಲಿಯೇ ಮುದ್ರಣವಾಗಬೇಕು ಎಂಬ ಘನವಾದ ಉದ್ದೇಶದಿ
ಶ್ರೀಯವರು ಅಚ್ಚುಕೂಟದ ಸ್ಥಾಪನೆಗೆ **ಆರು ಸಾವಿರ ರೂಪಾ**
**ಗಳನ್ನು** ದಾನ ಮಾಡಿದರು ಹಾಗೂ ಗಮಕ ಕಲೆಯ ಪುರೋಭಿವೃದ್ಧಿಗಾ
ಏರ್ಪಟ್ಟಿದ್ದ ನಿಧಿಗೆ **ಒಂದು ಸಾವಿರ** ರೂಪಾಯಿಗಳನ್ನು ದಾನಮಾಡಿದ
ಅಂತೂ ಒಟ್ಟು ೭,೦೦೦ ರೂಪಾಯಿಗಳನ್ನು ದಾನ ಮಾಡಿದರು.

13. **ಪರಿಷತ್ತಿಗೆ ಸದಸ್ಯ ಸಂಪತ್ತು**: ಸದಸ್ಯ ಸಂಪತ್ತನ್ನು ಹೆಚ್ಚಿಸು
ಸಲುವಾಗಿಯೂ ಪರಿಷತ್ತಿನ ಸಂದೇಶವನ್ನು ನಾಡಿನ ಮೂಲೆ ಮೂಲೆಗ
ಮುಟ್ಟಿಸುವ ಸಲುವಾಗಿಯೂ ತಮ್ಮ ಆರೋಗ್ಯವನ್ನು ಬಲಿಕೊಟ್ಟು
ನಾಡನ್ನೆಲ್ಲ ಸುತ್ತಾಡಿದರು. ಕನ್ನಡ ಭಾಷೆ ಸಾಹಿತ್ಯಗಳ ಹಳಮೆ-ಹಿರಿ
ಗಳನ್ನು ಸಾಮಾನ್ಯ ಜನಕ್ಕೆ ತಿಳಿಯುವ ಹಾಗೆ ತಮ್ಮ ವಾಗ್ಝರಿಯನ
ಹರಿಸಿದರು.

ಮೈಸೂರು ವಿಶ್ವವಿದ್ಯಾನಿಲಯದ ಮೂಲಕ, ಪರಿಷತ್ತಿನ ಮೂಲಕ, ಕನ್ನಡದ ಕೀರ್ತಿಧ್ವಜವನ್ನು ಎತ್ತಿ ಹಿಡಿದ ಈ ಮಹಾನುಭಾವರನ್ನು ನಮ್ಮ ಜನ ಅವರು ತೀರಿಕೊಂಡ ಮೇಲೆ ಮರೆತೇ ಬಿಟ್ಟಿತು. ಮಾಸ್ತಿಯವರು ಪರಿಷದಾಧ್ಯಕ್ಷರಾದ ಕೂಡಲೆ ಶ್ರೀ ಅವರ ಸ್ಮಾರಕ ಒಂದನ್ನು ನಿರ್ಮಿಸಬೇಕೆಂದು ಕನ್ನಡಿಗರಿಗೆ ಕರೆ ಕೊಟ್ಟರು. ಅವರ ಕರೆಗೆ ನಾವು ಓಗೊಡಲಿಲ್ಲ.



ಶ್ರೀ ಅವರ ಹೆಸರನ್ನು ಚಿರಸ್ಥಾಯಿಯಾಗಿ ಮಾಡಬೇಕೆಂಬ ಉದ್ದೇಶದಿಂದ ಅವರ ಅತಿ ನಮ್ರ ಶಿಷ್ಯನಾಗುವ ಪುಣ್ಯ ಪಡೆದಿದ್ದ ಈ ಲೇಖಕನು 1979ರಲ್ಲಿ ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನವನ್ನು ಅವರ ಎಲ್ಲ ಶಿಷ್ಯರ ಪರವಾಗಿ ಸ್ಥಾಪಿಸಿದನು. ಈ ಸಾಹಿತ್ಯಪ್ರೇರಕ ಸಂಸ್ಥೆಯನ್ನು ಉಳಿಸಿಕೊಂಡು ಬೆಳೆಸುವ ಕರ್ತವ್ಯ ಎಲ್ಲ ಕನ್ನಡಿಗರಿಗೆ ಸೇರಿದ್ದು.

ಈಗ ಅವರ ಜನ್ಮ ಶತಾಬ್ದಿ ವರ್ಷದಲ್ಲಿಯಾದರೂ ಅವರನ್ನು-ಆ ಪುಣ್ಯ ಪುರುಷನನ್ನು ಸ್ಮರಿಸುವ ಭಾಗ್ಯ ನಮ್ಮ ಪಾಲಿಗೆ ಒದಗಿ ಬಂದಿದೆ. ಕನ್ನಡನಾಡಿನ ಎಲ್ಲ ಕಾರ್ಯಕ್ಷೇತ್ರಗಳಲ್ಲಿಯೂ ಈ ಶತಾಬ್ದಿ ವರ್ಷದಲ್ಲಿ ಕನ್ನಡಕ್ಕೆ ಅಗ್ರಸ್ಥಾನ ದೊರೆಯುವಂತೆ ನಾವು ಶ್ರಮಿಸಿ ಜಯಗಳಿಸಿದೆವಾದರೆ ಅದಕ್ಕಿಂತಲೂ ದೊಡ್ಡ ಸ್ಮಾರಕವನ್ನು " ಶ್ರೀ " ಯವರ ಆತ್ಮ ಬಯಸಲಾರದು.

" ಶ್ರೀ " ಯವರ ಕನಸನ್ನು – ಇನ್ನೂ ಪರಿಪೂರ್ಣವಾಗಿ ನನಸಾಗದ ಕನಸನ್ನು – ನನಸನ್ನಾಗಿ ಮಾಡುವ ಪ್ರತಿಜ್ಞೆಯನ್ನು ಕನ್ನಡಿಗರು ಕೈಗೊಳ್ಳಲಿ, ಅವರು ಕಟ್ಟಿಕೊಂಡ ಕನಸೆಲ್ಲ ನನಸಾಗಲಿ, ಎಂದು ಹಾರೈಸುತ್ತೇನೆ.

# "ಶ್ರೀ"ಯವರ ವ್ಯಕ್ತಿತ್ವದಲ್ಲಿಯ ವಿರೋಧಾಭಾಸಗ

ಎಂಥ ಮಹಾಪುರುಷನಾದರೂ ಆತನ ಶೀಲ ಸ್ವಭಾವದಲ್ಲಿ ಪರ
ವಿರುದ್ಧಗಳಾಗಿ ತೋರುವ ಗುಣಲಕ್ಷಣಗಳು ಕಂಡುಬಂದರೆ ಆಶ್ಚ
ಪಡಬೇಕಾಗಿಲ್ಲ. ಮನುಷ್ಯನ ಕಾರ್ಯಕ್ಷೇತ್ರ ವಿಸ್ತಾರವಾದಷ್ಟೂ, ಅ
ಸ್ವಭಾವ ಸಂಕೀರ್ಣವಾದಷ್ಟೂ, ಅವನಲ್ಲಿ ಈ ವಿರೋಧಾಭಾಸ ಹೆಚ
ಶ್ರೀರಾಮಚಂದ್ರನ ಬಗೆಗೆ ಅವನು ವಜ್ರಕ್ಕಿಂತ ಕಠೋರ, ಕುಸು
ಕ್ಕಿಂತಲೂ ಕೋಮಲ ಎಂಬ ಭವಭೂತಿಯ ಮಾತನ್ನು ಇಲ್ಲಿ ಸ್ಮರಿಸಬಹು
ಈ ಗುಣ ವಿಶೇಷವನ್ನು ಇಂಗ್ಲಿಷಿನ mixture of opposit
ಎಂದು ಗುರುತಿಸಲಾಗಿದೆ. ಸಾಮಾನ್ಯರಲ್ಲಿಯೂ ಈ ವಿರುದ್ಧ ಗುಣ
ಮಿಶ್ರಣ ಇರುತ್ತದೆ. ಅವು ಎಲ್ಲರ ಗಮನಕ್ಕೂ ಬಾರವು. ಪ್ರಸಿ
ಪುರುಷರು ಒಂದಲ್ಲ ಒಂದು ಸನ್ನಿವೇಶದಲ್ಲಿ ತಮ್ಮ ನಡೆನುಡಿಗಳ ಮೂ
ಸರ್ವಜನರ ಗಮನ ಸೆಳೆಯುತ್ತಾರೆ; ಜನರ ವಂದನೆಗೋ ನಿಂದನೆಗೆ
ಗುರಿಯಾಗುತ್ತಾರೆ. ಈ ದ್ವಂದ್ವ ವಿರೋಧಕ್ಕೆ ಕಾರಣ, ಅವರು ಒಂ
ವಿಷಯವನ್ನೊ ಒಂದು ವಿಚಾರವನ್ನೊ ಒಂದು ನೆಲೆಯಿಂದ ಬೆಂಬ
ಇನ್ನೊಂದು ನೆಲೆಯಿಂದ ವಿರೋಧಿಸುವುದು; ಪರಸ್ಪರ ವಿರೋಧವಾ
ಕಾಣುವ ಎರಡು ನೆಲೆಗಳಲ್ಲಿಯೂ ಕಾಲೂರಿರುವುದು. ಉದಾಹರಣೆ
ಮಹಾತ್ಮಾ ಗಾಂಧಿಯವರು ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಸಂದರ್ಭ
ದಲ್ಲಿ ಭಾರತವನ್ನು ಬಿಟ್ಟು ತೊಲಗಿರಿ ಎಂದು ಬ್ರಿಟಿಷ್ ಅರಸರ
ನೋಟೀಸು ಕೊಟ್ಟರೂ ಬ್ರಿಟಿಷ್ ಪ್ರಜೆಗಳನ್ನು ದ್ವೇಷಿಸುತ್ತಿರಲಿಲ್ಲ
ಉಗ್ರಪಂಥದವರಿಗೆ ಈ ನಿಲುವು ಸರಿದೋರಲಿಲ್ಲ. ಒಂದು ನಿಟ್ಟಿನಲ್ಲಿ ವರ್ಣಾ
ಶ್ರಮ ಧರ್ಮವನ್ನು ಎತ್ತಿ ಹಿಡಿಯುತ್ತಾ ಇನ್ನೊಂದು ನಿಟ್ಟಿನಲ್ಲಿ ವರ್ಣಾ
ಶ್ರಮ ಬಾಹಿರವಾಗಿದ್ದ ಹರಿಜನರನ್ನು ಹಿಂದೂ ಧರ್ಮದ ಚೌಕಟ್ಟಿನ
ಒಳಪಡಿಸಿ ಅವರ ಉದ್ಧಾರ ಆಗಬೇಕೆಂದರು. ಸನಾತನಿಗಳು ಅಂದ
ಮಹಾತ್ಮರ ನಿಲುವನ್ನು ಪ್ರಬಲವಾಗಿ ವಿರೋಧಿಸಿದರು. ವಿಶಾಲದೃಷ್ಟಿಯ

ಸಮನ್ವಯಶೀಲರಿಗೆ ಪರಸ್ಪರ ವಿರುದ್ಧ ಎನಿಸದೆ ಇದ್ದು ಸಂಕುಚಿತ ದೃಷ್ಟಿಯ ಸಾಮಾನ್ಯರಿಗೆ ವಿರುದ್ಧವೆಂದೇ ಕಾಣುತ್ತದೆ. ವಿರೋಧವಿಲ್ಲದೆಡೆಯಲ್ಲಿ ವಿರೋಧ ಕಾಣುವುದೇ ವಿರೋಧಾಭಾಸ. "ಶ್ರೀ"ಯವರ ವ್ಯಕ್ತಿತ್ವದಲ್ಲಿ ಈ ವಿರೋಧಾಭಾಸ ಕೆಲವು ಮುಖ್ಯ ವಿಚಾರಗಳಲ್ಲಿ ಎದ್ದು ಕಾಣುತ್ತಿತ್ತು.

ಬಿ. ಎಂ. ಶ್ರೀಯವರಲ್ಲಿ ಮೇಲೆ ವಿವರಿಸಿದ ವಿರೋಧಾಭಾಸವು ಮುಖ್ಯವಾಗಿ ಕನ್ನಡ–ಇಂಗ್ಲೀಷ್, ಕನ್ನಡ–ಸಂಸ್ಕೃತ, ರಾಜಭಕ್ತಿ–ರಾಷ್ಟ್ರ ಭಕ್ತಿ, ಧರ್ಮಶ್ರದ್ಧೆ–ನಾಸ್ತಿಕತೆ, ಏಕಾಂತ ಪ್ರೀತಿ–ಜನಸಂಪರ್ಕ : ಈ ಮುಂತಾದ ಕೆಲವು ನೆಲೆಗಳಲ್ಲಿ ಸ್ಪಷ್ಟವಾಗಿ ಎದ್ದು ಕಾಣುತ್ತಿತ್ತು.

ಬಿ. ಎಂ. ಶ್ರೀಯವರು ತಮ್ಮ ಎಫ್. ಎ; ಬಿ. ಎ. ತರಗತಿಗಳಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡಿದ್ದರೂ ಅವರು ಮೊದಲು ಒಲಿದದ್ದು ಇಂಗ್ಲಿಷಿನ ಕಡೆಗೆ. ಇಂಗ್ಲಿಷ್ ಭಾಷೆ, ಸಾಹಿತ್ಯ ಗಳಲ್ಲಿ ಎಂ. ಎ. ಪದವಿಯನ್ನು ಪಡೆದ ಮೇಲೆ ಒಂದು ವಿಚಿತ್ರ ಘಟನೆ ಅವರನ್ನು ಕನ್ನಡಕ್ಕೆ ಗಂಟು ಹಾಕಿತು. ಪ್ರಾರಂಭದ ವಿದ್ಯಾರ್ಥಿ ದಶೆ ಯಲ್ಲಿ ಅವರಿಗೆ ಕನ್ನಡದ ಪ್ರೀತಿ ಬಲವಾಗಿತ್ತೋ ಇಲ್ಲವೋ ಖಚಿತವಾಗಿ ಹೇಳುವುದಕ್ಕೆ ಯಾವ ದಾಖಲೆಯೂ ಇದ್ದಂತಿಲ್ಲ. ಆದರೆ ಅವರು ಮಹಾ ಮೇಧಾವಿಗಳೂ ಉಭಯ ಭಾಷಾ ವಿಶಾರದರೂ ಉಭಯ ವ್ಯಾಕರಣ ಪಂಡಿತರೂ ಕೆಲವು ಕನ್ನಡ ಕಾವ್ಯಗಳನ್ನು ವಾಚೋವಿಧೇಯವಾಗಿ ಮಾಡಿ ಕೊಂಡಿದ್ದವರೂ ಆದ ಕಾನಕಾನಹಳ್ಳಿ ವರದಾಚಾರ್ಯರ ಶಿಷ್ಯರು. ಅವರ ಶಿಷ್ಯರಾದವರಿಗೆ ಯಾರಿಗೂ ಪ್ರಾಚೀನ ಕನ್ನಡ ಕಾವ್ಯದ ಬಗೆ ಅಭಿಮಾನ ಹುಟ್ಟದೆ ಇರುತ್ತಿರಲಿಲ್ಲ. ಇಂಥವರ ಶಿಷ್ಯರಾದ ಬಿ. ಎಂ. ಶ್ರೀಯವರಿಗೆ ಕನ್ನಡದ ಅಭಿಮಾನ ಆ ಕಾಲದಲ್ಲಿ ಹುಟ್ಟಿರಬೇಕು. ಅವರ ಕನ್ನಡ ವಿದ್ವತ್ತು ಅವರನ್ನು ಮಹಾರಾಜರವರ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರನ್ನಾಗಿ ನೇಮಿಸಿದ ಅಧಿಕಾರಿಗಳಿಗೆ ಗೊತ್ತಿದ್ದಿರಬೇಕು. ಏಕೆಂದರೆ ಬಿ. ಎ. ವಿದ್ಯಾರ್ಥಿಗಳಿಗೆ ಕನ್ನಡ ಪಾಠವನ್ನೂ ಹೇಳುವ ಹೆಚ್ಚಿನ

ಕೆಲಸವನ್ನು ಅವರಿಗೆ ವಹಿಸಿದ್ದರು. ಈ ಕಾಲದಲ್ಲಿ ಅವರ ಹಳಗನ್ನ
ಕಾವ್ಯಪ್ರೇಮ ಆಳವೂ ವಿಸ್ತಾರವೂ ಆಗಿದ್ದಿರಬೇಕು. ಆದರೆ ಈ ಕನ್ನ
ಕಲಿಸುವ ಕಾಯಕ ಬಹಳ ಕಾಲದವರೆಗೆ ಮುಂದುವರಿಯಲಿಲ್ಲ, ಪೂರ್ತಿ
ಇಂಗ್ಲಿಷ್ ಸಾಹಿತ್ಯವನ್ನು ಬೋಧಿಸುವ ಅಧ್ಯಾಪಕರಾದರು. ಅಮೇ
ಪ್ರಾಧ್ಯಾಪಕರೂ ಆದರು. ಆದರೆ ವಿದ್ಯಾರ್ಥಿಯ ಕೊನೆಯ ಹಂತಗಳಲ್ಲಿ
ಕನ್ನಡದ ಬಗ್ಗೆ ಕಳಕಳಿ, ಕನ್ನಡದ ದುರವಸ್ಥೆಯನ್ನು ಕಂಡು ವ್ಯ
ಇದ್ದುದು ತಿಳಿದು ಬರುತ್ತದೆ. ಆಗಿನ ಕಾಲದಲ್ಲಿ ಇಂಗ್ಲಿಷಿನಲ್ಲಿ ಪ್ರಾವೀಣ
ಪಡೆಯದವರೂ ಕೂಡ ತಕ್ಕಮಟ್ಟಿಗೆ ಇಂಗ್ಲಿಷು ಕಲಿತಿದ್ದರೆ ಇಂಗ್ಲಿಷಿನಲ್ಲಿ
ಪತ್ರವ್ಯವಹಾರ ಮಾಡುತ್ತಿದ್ದುದು ರೂಢಿ. ಇಂಗ್ಲಿಷ್ ವ್ಯಾಮೋಹ
ವಿದ್ಯಾವಂತರ ಯುಗಧರ್ಮವೇ ಆಗಿದ್ದಿತು. ಈ ಪರಿಸ್ಥಿತಿಯಲ್ಲಿ ಇಂಗ್ಲಿಷ
ಭಾಷೆ ಸಾಹಿತ್ಯಗಳನ್ನು ಕರತಲಾಮಲಕ ಮಾಡಿಕೊಂಡಿದ್ದ, ಜೊತೆಯ
ಆಂಗ್ಲ ಪ್ರೊಫೆಸರರ ಅಸೂಯೆಗೆ ಕೂಡ ಪಾತ್ರರಾಗಿದ್ದ ಇಂಗ್ಲಿಷ
ಪ್ರಾಧ್ಯಾಪಕ ಕನ್ನಡಕ್ಕೆ ಒಲಿದಿದ್ದು ಒಂದು ಪವಾಡವೆಂದೇ ಹೇಳಬೇಕು
ಇಂಗ್ಲಿಷ್ ಪಾಠ ಹೇಳುವವರು ತಮ್ಮ ಅಭಿವ್ಯಕ್ತಿಗಾಗಿ ಕನ್ನಡವನ್ನು
ಅವಲಂಬಿಸುವ ಪರಿಪಾಟಿ ಇಂದು ಸರ್ವಸಾಮಾನ್ಯವಾಗಿದೆ. ಬಿ.ಎಂ.ಶ್ರೀ
ಯುವರ ಶಿಷ್ಯರು ಕೆಲವರನ್ನು ಹೊರತುಪಡಿಸಿದರೆ ಇಂಗ್ಲಿಷ್ ಪಂಡಿತರ
ಹಳಗನ್ನಡ ಕಾವ್ಯವನ್ನು ಹಳಗನ್ನಡ ವ್ಯಾಕರಣವನ್ನೂ ಕಣ್ಣೆತ್ತಿಯೂ
ನೋಡುತ್ತಿರಲಿಲ್ಲ. ಕನ್ನಡ ಕಾವ್ಯವನ್ನು ಹೊಸ ದಿಕ್ಕಿಗೆ ತಿರುಗಿಸಬೇಕೆಂದ
ಪ್ರಯತ್ನಪಟ್ಟ ಶ್ರೀಯವರು ಹಳಗನ್ನಡ ಕಾವ್ಯವನ್ನು ಸ್ವತಃ ತಾವ
ವ್ಯಾಸಂಗ ಮಾಡಿದ್ದಲ್ಲದೆ, ಕನ್ನಡದ ಪ್ರಗತಿಯನ್ನು ಬಯಸುವವರೆಲ್ಲರೂ
ಹಳಗನ್ನಡ ಕಾವ್ಯವನ್ನು ಓದಬೇಕು. ಜನತೆಗೆ ಹಳಗನ್ನಡ ಕಾವ್ಯದ
ವಿಚಾರವಾಗಿ ತಿಳಿಯಹೇಳಬೇಕು ಎಂದು ತಮ್ಮ ಭಾಷಣ ಮತ್ತು
ಲೇಖನಗಳಲ್ಲಿ ಹೇಳುತ್ತಿದ್ದುದು ಅವರ ಪೂರ್ವ ಪರಂಪರೆಯ ಪ್ರೀತಿಗೆ
ಸ್ಪಷ್ಟ ನಿದರ್ಶನ. ಕ್ರಾಂತಿಯನ್ನು ಮಾಡಬಯಸುವವರು ಪೂರ್ವ
ಪೂರ್ವಪರಂಪರೆಯಲ್ಲಿ ಶ್ರದ್ಧೆಯಿಡುವುದು ಅಪುರೂಪ. ತಮ್ಮ ಇಂಗ್ಲಿಷ್
ಗೀತಗಳ ಮೂಲಕ ಕನ್ನಡ ಕಾವ್ಯದಲ್ಲಿ ಕ್ರಾಂತಿಯನ್ನು ಉಂಟುಮಾಡಿದ

ಶ್ರೀಯವರ ಪರಂಪರಾ ಪ್ರೀತಿ ಒಂದು ವಿರುದ್ಧ ಲಕ್ಷಣವಾಗಿ ತೋರ ಬಹುದು. ಆದರೆ ಪರಂಪರೆಯ ಸತ್ವವನ್ನು ಹೀರಿಕೊಳ್ಳದೆ ಯಾವ ಕ್ರಾಂತಿಯೂ ಊರ್ಜಿತವಾಗುವುದಿಲ್ಲ. ಬಿ. ಎಂ. ಶ್ರೀಯವರು ಈ ರಹಸ್ಯ ವನ್ನು ಅರಿತಿದ್ದರಿಂದಲೇ ಪೂರ್ವಕಾವ್ಯದ ಸತ್ವವನ್ನು ಹೊಸಕಾವ್ಯದಲ್ಲಿ ಪ್ರದರ್ಶನ ಮಾಡಲು ಪ್ರಯತ್ನಿಸಿದರು.

ಬಿ. ಎಂ. ಶ್ರೀಯವರು ಸಂಸ್ಕೃತ ದ್ವೇಷಿಗಳು ಎಂಬ ಸಲ್ಲದ ಆರೋಪ ವನ್ನು ಸಂಸ್ಕೃತಾಭಿಮಾನಿಗಳು ಅವರ ಮೇಲೆ ಸತತವಾಗಿ ಹೊರಿಸುತ್ತಿದ್ದರು. ಇದಕ್ಕೆ ಸ್ವಲ್ಪವೂ ಆಧಾರವಿಲ್ಲ. ಅವರು ಸಂಸ್ಕೃತದ್ವೇಷಿಗಳಾಗಿದ್ದರೆ ಕನ್ನಡ ನಾಡಿನ ಪ್ರತಿಯೊಬ್ಬ ವಿದ್ಯಾವಂತನೂ ಕನ್ನಡ, ಇಂಗ್ಲಿಷ್ ಮತ್ತು ಸಂಸ್ಕೃತಗಳನ್ನು ಕಲಿಯಬೇಕೆಂದು ಹೇಳುತ್ತಿರಲಿಲ್ಲ. ಸಂಸ್ಕೃತದ ಘನತೆ ಯನ್ನು ಮೆಚ್ಚಿಕೊಂಡು ಸಂಸ್ಕೃತದ ಪರವಾಗಿ ಅವರು ಹೇಳುತ್ತಿದ್ದ ಮಾತುಗಳು ಬಾಯುಪಚಾರದ ಮಾತಾಗಿರದೆ, ಸಂಸ್ಕೃತದ ಶ್ರೇಷ್ಠ ವಾಙ್ಮಯವನ್ನು ಓದಿ ಅರ್ಥಮಾಡಿಕೊಂಡು ಅದರ ಸಾರ್ವಕಾಲಿಕ ಮೌಲ್ಯ ವನ್ನು ಬಲ್ಲ ಒಬ್ಬ ಸರ್ವಭಾಷಾಪ್ರೇಮಿಯ ಮಾತಾಗಿದ್ದಿತು. ವಾಸ್ತವವಾಗಿ ಅವರು ತಮ್ಮ ಜ್ಞಾನಭಂಡಾರವನ್ನು ವಿಸ್ತಾರಮಾಡಿಕೊಳ್ಳುವುದಕ್ಕೆ ಮಾತ್ರ ವಲ್ಲದೆ ಕನ್ನಡದ ಮುನ್ನಡೆಗೆ ಶ್ರಮಿಸುವ ದೃಷ್ಟಿಯಿಂದ ಸಂಸ್ಕೃತದ ಜೊತೆಗೆ ತಮಿಳು ಮತ್ತು ಗ್ರೀಕ್ ಭಾಷೆಗಳನ್ನು ಕರಗತ ಮಾಡಿಕೊಂಡಿದ್ದರು. ಸಂಸ್ಕೃತದಿಂದ ಕನ್ನಡ ಉಪಕೃತವಾಗಿರುವುದನ್ನು ಅವರು ಅರಿತಿದ್ದರು. ಸಂಸ್ಕೃತದಿಂದ ಕನ್ನಡಕ್ಕೆ ಒಂದು ವಿಧದಲ್ಲಿ ಹಾನಿತಟ್ಟಿದ್ದುದನ್ನೂ ಅವರು ಬಲ್ಲವರಾಗಿದ್ದರು. ಈ ಮಾತನ್ನು ನೋಡಿ: **"ಕನ್ನಡ ನಾಡಿಗೆ ಕನ್ನಡವೇ ಗತಿ, ಅನ್ಯಥಾ ಶರಣಂ ನಾಸ್ತಿ. ಸಂಸ್ಕೃತವಲ್ಲ, ಇಂಗ್ಲಿಷಲ್ಲ, ಹಿಂದಿ ಯಲ್ಲ, ಕನ್ನಡ."** ಕನ್ನಡ ನಾಡಿಗೆ ಸಂಸ್ಕೃತ ಬೇಕಿಲ್ಲ ಎಂದ ಅವರು ಸಂಸ್ಕೃತದ ವಿಷಯದಲ್ಲಿ ಕೃತಜ್ಞತಾ ಭಾವವನ್ನು ವ್ಯಕ್ತಪಡಿಸಿರುವ ಈ ಮಾತುಗಳನ್ನೂ ಗಮನಿಸಿ : "(ಸಂಸ್ಕೃತ) ಹಿಂದಿನಿಂದಲೂ ಈ ದೇಶದಲ್ಲಿ ಪೂಜ್ಯ ಸ್ಥಾನದಲ್ಲಿರುವುದು; ಕನ್ನಡ ಭಾಷೆಗೆ ಬಹುಕಾಲ ನಾನಾ ಬಗೆಯ

ಚೈತನ್ಯವನ್ನು ತುಂಬಿ ನೂತನ ಮಾರ್ಗಗಳನ್ನು ಕಲ್ಪಿಸಿಕೊಟ್ಟಿರುವುದು. ಅನೇಕ ಮಹನೀಯರು ತಮ್ಮ ಜೀವಮಾನವನ್ನೆಲ್ಲ ಇದಕ್ಕಾಗಿ ಧಾರೆಯೆರೆದು ಪುಷ್ಟವಾಗಿ ಮಾಡಿರುವ ಭಾಷೆ ಇದು. ಈಗಲೂ ಕೂಡ ಇದರ ಮೇಲೆ ಹೆಚ್ಚು ವಿಶ್ವಾಸ, ಮಮತೆಯಿರುವ ಜನರು ಈ ಭಾಷೆಯಲ್ಲೇ ಮಾತನಾಡಿದರೂ ಆಡಬಹುದಾಗಿದೆ. ಆದ್ದರಿಂದ ಇದನ್ನೇ ಸುಲಭಗೊಳಿಸಿ ಭರತ ಖಂಡಕ್ಕೆ ರಾಷ್ಟ್ರಭಾಷೆಯನ್ನಾಗಿ ಏಕೆ ಮಾಡಬಾರದೆಂದು ಕೇಳಿದರೂ ಕೇಳಬಹುದು." ಶ್ರೀಯವರು ಘೋಷಿಸಿರುವ ಈ ಮಹಾವಾಕ್ಯವೂ ಗಮನಿಸತಕ್ಕದ್ದು: "ನಾವು ಸ್ವೀಕರಿಸತಕ್ಕ ಭಾಷೆಗಳನ್ನು ಹೇಳುತ್ತಿರುವಾಗ ಸಂಸ್ಕೃತವನ್ನು ಬಿಡುವುದಕ್ಕಿಲ್ಲ. ಇದು ನಮ್ಮ ಪೂರ್ವಿಕರಾದ ಆರ್ಯರ ಭಾಷೆ. ಇದರಲ್ಲಿ ನಮ್ಮ ಪುಸ್ತಕಭಂಡಾರವೆಲ್ಲ ಅಡಗಿದೆ. ಇದನ್ನು ತಿಳಿದ ಹೊರತು ಹಿಂದಿದ್ದ ಸ್ಥಿತಿಯಾಗಲಿ, ಈಗಿನ ಸ್ಥಿತಿಗೆ ಕಾರಣವಾಗಲಿ, ಮುಂದೆ ತಿದ್ದಬೇಕಾದ ರೀತಿಯಾಗಲಿ ತಿಳಿಯುವುದಿಲ್ಲ. ಆದ್ದರಿಂದ ಇಡೀ ಇಂಡಿಯದಲ್ಲಿ ವಿದ್ಯಾವಂತನೆನ್ನುವ ಪ್ರತಿಯೊಬ್ಬನೂ ಇಂಗ್ಲಿಷ್, ಸಂಸ್ಕೃತ ತನ್ನ ಕಡೆಯ ದೇಶಭಾಷೆ, ಈ ಮೂರನ್ನೂ ಚೆನ್ನಾಗಿ ತಿಳಿದಿರಬೇಕು. ಹರ್ಷವೂ ಲಾಭವೂ ದೇಶಕ್ಕೆ ಉನ್ನತಿಯೂ ಸೌಖ್ಯವೂ ಬರುವಂತೆ ಶ್ರಮ ಬೀಳಬೇಕೆನ್ನುವವನಿಗೆ ಈ ಮೂರೂ ಬಂದೇ ತೀರಬೇಕು; ಇಲ್ಲದಿದ್ದರೆ ಅಷ್ಟು ನೇರ್ಪಿಲ್ಲ". ಈ ಘನವಾದ ಕನ್ನಡ ನಾಡಿನ ಏಳಿಗೆಯ ಬಗೆಗೆ ಚಿಂತಿಸುವಾಗ ಸದಾ ನೆನಪಿನಲ್ಲಿಟ್ಟಿರಬೇಕಾದ ಅಭಿಪ್ರಾಯವನ್ನು ಹೊಂದಿರುವ ಮಹಾನುಭಾವರನ್ನು ಸಂಸ್ಕೃತದ್ವೇಷಿ ಎಂದು ಎಣಿಸಬಹುದೆ ?

ಸಂಸ್ಕೃತದಿಂದ ನಾನಾ ಬಗೆಗಳಲ್ಲಿ ನಮಗೆ ಹಿಂದೆ ಉಪಕಾರವಾಗಿದೆ, ಮುಂದೆಯೂ ಆಗಬೇಕಾಗಿದೆ. ಪ್ರಪಂಚದ ಎಲ್ಲ ಮುಖ್ಯ ಭಾಷೆಗಳಿಂದಲೂ ಶ್ರೇಷ್ಠಗ್ರಂಥಗಳನ್ನು ಭಾಷಾಂತರಿಸಿ ಕನ್ನಡದ ಬೊಕ್ಕಸವನ್ನು ತುಂಬಿಕೊಳ್ಳಬೇಕಾಗಿದೆ. ಈ ಭಾಷಾಂತರ ಕಾರ್ಯವನ್ನು ಕುರಿತು ಹೇಳುತ್ತ ಶ್ರೀಯವರು ವ್ಯಕ್ತಪಡಿಸಿರುವ ಅಭಿಪ್ರಾಯ ಅತ್ಯಂತ ಗಮನಾರ್ಹವಾದುದು:

"ಭಾಷಾಂತರವನ್ನು ಹೇಳುತ್ತಿರುವಾಗ ಸಂಸ್ಕೃತವನ್ನು ನಾನು ಮರೆಯುವುದಿಲ್ಲ. ಇದರಲ್ಲಿ ಸಂಸ್ಕೃತ ಪಂಡಿತರು ಧಾರಾಳವಾಗಿ ಕನ್ನಡಿಗರನ್ನು ಉದ್ಧಾರ ಮಾಡಬಹುದು. ಮತ ವಿಷಯವಾಗೂ ನೀತಿ ವಿಷಯವಾಗೂ ಆಚಾರ ಸಂಸ್ಕಾರಗಳ ವಿಷಯವಾಗೂ ಈಗ ದೇಶದಲ್ಲಿ ಎಲ್ಲೆಲ್ಲೂ ಚರ್ಚೆ ನಡೆಯುತ್ತಿದೆಯಷ್ಟೆ. ಜೀವಕ್ಕೆ ಹೇಗೆ ಕರ್ಮಪಾಶ ಬಿಡುವುದಿಲ್ಲವೋ ಹಾಗೆ ಏನು ಮಾಡಿದರೂ ಪೂರ್ವದ ಪ್ರಭಾವದಿಂದ ನಾವು ತಪ್ಪಿಸಿಕೊಳ್ಳಲಾರೆವು. ಆದ್ದರಿಂದ ಏನು ತಿದ್ದುಪಾಟು ಆಗಬೇಕಾದರೂ ಪೂರ್ವಪದ್ಧತಿಯನ್ನು ಪರಿಶೋಧಿಸಿದಲ್ಲದೆ ಯತ್ನವಿಲ್ಲ. ಇದಕ್ಕಾಗಿ ಸಂಸ್ಕೃತದಲ್ಲಿ ವಿದ್ವಾಂಸರಾದವರು ನಿಸ್ಸಾರವಾದ ಕಾವ್ಯ ನಾಟಕಗಳ ಭಾಷಾಂತರವನ್ನು ಬಿಟ್ಟು ಆಳಿದ ಮಹಾಸ್ವಾಮಿಗಳಾದ ಮುಮ್ಮಡಿ ಕೃಷ್ಣರಾಜ ಒಡೆಯರು, ಚಾಮರಾಜ ಒಡೆಯರು, ಇವರ ಹೆಸರಿನಲ್ಲಿ ಭಾಗವತ, ಭಾರತ, ರಾಮಾಯಣಗಳನ್ನು ಪ್ರತಿಯೊಂದು ಮನೆಯಲ್ಲಿಯೂ ಹೆಂಗಸರೂ ಕೂಡ ಓದಿಕೊಳ್ಳುವಂತೆ ಮಾಡಿರುವ ರೀತಿಯಲ್ಲಿ ಶ್ರುತಿ, ಸ್ಮೃತಿ, ಉಪನಿಷತ್ತು, ಪುರಾಣಗಳನ್ನೂ ಆಚಾರ್ಯರ ಭಾಷ್ಯಗಳನ್ನೂ ಅನ್ಯಮತಗಳ ತತ್ವಗಳನ್ನೂ ನಿಷ್ಪಕ್ಷಪಾತವಾಗಿ ಭಾಷಾಂತರಮಾಡಿಕೊಟ್ಟರೆ ಜನಗಳ ಜ್ಞಾನೋದಯವೇ ಅಲ್ಲದೆ ಕನ್ನಡ ಕಾವ್ಯಮಾಲೆಯೂ ಸಮೃದ್ಧವಾಗುತ್ತದೆ. ಪ್ರಕೃತದಲ್ಲಿ ನಮ್ಮ ದೇಶದಲ್ಲಿ ಇದಕ್ಕಿಂತ ಶ್ರೇಷ್ಠವಾದ ಉಪಕಾರ ನನಗೆ ತೋರುವುದಿಲ್ಲ". ನಾಡಿಗೆ 'ಉಪಕಾರವಾದ ಇಂಥ ಅನುಸರಣೀಯ ಮಾರ್ಗವನ್ನು ತೋರಿಸಿಕೊಟ್ಟ ಮಹನೀಯರನ್ನು ಸಂಸ್ಕೃತ ದ್ವೇಷಿ ಎಂದು ಕರೆಯಬಹುದೇ ?

ಆದರೆ ವಸ್ತುಸ್ಥಿತಿ ಏನು ? ಹಿಂದಿನ ಕಾಲದ ಸಂಸ್ಕೃತ ವಿದ್ವಾಂಸರು ಕನ್ನಡಕ್ಕೆ ವಿರೋಧವಾದ ರೀತಿಯಲ್ಲಿ ಕೆಲಸ ಮಾಡಲಿಲ್ಲ. ನಾಗವರ್ಮ ಭಟ್ಟಾಕಳಂಕರಂಥ ಸಂಸ್ಕೃತಭಾಷಾ ವಿಶಾರದರು ಕನ್ನಡದ ಹಿರಿಮೆಯನ್ನು ಅಂದಿನ ವಿಶಾಲಲೋಕಕ್ಕೆ ತೋರಿಸಿಕೊಡುವುದಕ್ಕಾಗಿ ಸಂಸ್ಕೃತದಲ್ಲಿ ಕನ್ನಡ ವ್ಯಾಕರಣಗಳನ್ನು ಬರೆದರು. ಇಂದಿನ ಅನೇಕ ಮಂದಿ ಸಂಸ್ಕೃತ

ವಿದ್ವಾಂಸರು (ಅಪವಾದರೂಪದ ಉಭಯಭಾಷಾ ಪ್ರೇಮಿಗಳು ಕೆಲವರನ್ನು
ಬಿಟ್ಟರೆ) ಶ್ರೀಯವರು ತೋರಿಸಿಕೊಟ್ಟ ಮಾರ್ಗದಲ್ಲಿ ಉಭಯಭಾ
ಸೇವೆ ಮಾಡುವುದನ್ನು ಬಿಟ್ಟು, ಉದಾರ ಅಂಕದಾನದ ಆಮಿಷವನ್ನ
ಒಡ್ಡಿ ಮುಗ್ಧ ಕನ್ನಡ ವಿದ್ಯಾರ್ಥಿಗಳನ್ನು ಸಂಸ್ಕೃತದ ತೆಕ್ಕೆಗೆ ಸಿಕ್ಕಿ
ಇತ್ತ ಕನ್ನಡವೂ ಬರಲಿಲ್ಲ, ಅತ್ತ ಸಂಸ್ಕೃತವೂ ಬರಲಿಲ್ಲ ಎಂಬ ಉಭಯ
ಭಾಷಾ ದ್ರೋಹವನ್ನು ಎಸಗುತ್ತಿದ್ದಾರೆ. ಮಾನ್ಯ ಆರ್. ಗುಂಡ
ರಾಯರು ಮಂತ್ರಿಗಳಾಗಿದ್ದ ಕಾಲದಲ್ಲಿ ಶಿಕ್ಷಣದಲ್ಲಿ ಸಂಸ್ಕೃತ, ಕನ್ನಡ
ಹಿಂದಿ, ಉರ್ದು ಇತ್ಯಾದಿ ಭಾಷೆಗಳ ಸ್ಥಾನವನ್ನು ನಿರ್ಧರಿಸುವುದಕ್ಕಾ
ರಚಿಸಿದ ಗೋಕಾಕ್ ಸಮಿತಿಯ ರಚನೆಗೆ ಮುಖ್ಯ ಪ್ರೇರಕ ಶಕ್ತಿಯಾದದ್ದು
ಸಂಸ್ಕೃತಪರ-ಕನ್ನಡ ವಿರೋಧ ನೀತಿ- ಈ ವಿದ್ಯಮಾನ ಇಂದಿನದಲ್ಲ
ಬಲು ಹಿಂದಿನದು.

ಆದರೆ ಶ್ರೀಕಂಠಯ್ಯನವರು ಯಾವ ಕಡೆಯಿಂದ ಕನ್ನಡದ ಏಳಿಗೆ
ಹಾನಿಬಂದರೂ ಅದನ್ನು ಸ್ವಾಗತಿಸುತ್ತಿರಲಿಲ್ಲ. ಹಳಗನ್ನಡ ಕಾವ್ಯವನ್ನು
ಮೆಚ್ಚಿಕೊಂಡೂ, ಕೆಲವು ಕವಿಗಳು ಬರೆದದ್ದು ಕನ್ನಡವೋ ಸಂಸ್ಕೃತವೋ
ಎಂದು ಸಂದೇಹ ಬರುವ ಹಾಗೆ ಸಂಸ್ಕೃತಮಯ ಮಾಡಿ ನಿರ್ಮಾಣ
ಮಾಡಿರುವ ಕನ್ನಡ ಶೈಲಿಯನ್ನು ಶ್ರೀಯವರು ಬಿಚ್ಚುಮಾತುಗಳಿಂದ
ಕೊಚ್ಚಿಹಾಕಿದ್ದಾರೆ.

ಬಿ. ಎಂ. ಶ್ರೀಕಂಠಯ್ಯನವರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್
ಆಗಿದ್ದ ಕಾಲದಲ್ಲೇ ಕನ್ನಡ ವಿದ್ಯಾರ್ಥಿಗಳು ಅಂಕಗಳ ಆಮಿಷಕ್ಕಾಗಿ
ಸಂಸ್ಕೃತವನ್ನೋ ಫ್ರೆಂಚನ್ನೋ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳು
ತ್ತಿದ್ದರು. ದ್ವಿತೀಯ ಭಾಷೆಯಾಗಿ ಕನ್ನಡದೊಂದಿಗೆ ಸಲ್ಲದ ಪೈಪೋಟಿ
ಮಾಡುತ್ತಿದ್ದ ಸಂಸ್ಕೃತದ ಸ್ಥಾನಮಾನವನ್ನು ನೇರ್ಪಡಿಸುವ ಸೂಚನೆ
ಮಾಡಿದ್ದಕ್ಕಾಗಿ ಜಿ. ಆರ್. ಜೋಸ್ಯರ್ ಎಂಬ ಸಂಸ್ಕೃತ ವಿದ್ವಾಂಸರು
ದೊಡ್ಡ ಹಗರಣ ಮಾಡಿದರು. ಅದರದ್ದೇ ಒಂದು ಚರಿತ್ರೆ. ಕುತೂಹಲ
ವುಳ್ಳವರು ಮೈಸೂರು ಕಾವ್ಯಾಲಯ ಪ್ರಕಟಿಸಿರುವ ತೀ. ನಂ. ಶ್ರೀಯವರ

ಕಾವ್ಯಾನುಭವ' ಎಂಬ ಗ್ರಂಥದಲ್ಲಿ ಈ ಪ್ರಕರಣದ ತಿಳಿವಳಿಕೆಯನ್ನು ಪಡೆಯಬಹುದು. ಈಗಿನ ಸಂಸ್ಕೃತೋದ್ಧಾರಕರು ಸಂಸ್ಕೃತವೂ ಕನ್ನಡದ ಜೊತೆಯಲ್ಲಿ ಮಾತೃಭಾಷೆಯ (ದೇಶಭಾಷೆಯ) ಸ್ಥಾನ ಪಡೆಯಬೇಕೆಂದು ನ್ಯಾಯಸ್ಥಾನಕ್ಕೆ ಹೋಗಿದ್ದಾರೆ. ಈಗ ಬಿ. ಎಂ. ಶ್ರೀಯವರೇನಾದರೂ ಬದುಕಿದ್ದರೆ 'ಗೋಕಾಕ್ ಚಳವಳಿಯು' ಬದಲು 'ಬಿ. ಎಂ. ಶ್ರೀ. ಚಳವಳಿ' ಆಗುತ್ತಿತ್ತು.

ಬಿ. ಎಂ. ಶ್ರೀ. ಅವರು ರಾಜಭಕ್ತರು, ಮಹಾರಾಜರನ್ನು ಓಲೈಸಲು ಯಾವಾಗಲೂ ಟೊಂಕಕಟ್ಟಿ ನಿಂತಿರುತ್ತಾರೆ ಎಂದು ಹಾಸ್ಯ ಮಾಡುತಿದ್ದ ಜನರು ಇದ್ದರು. ಚಿಕ್ಕದೇವರಾಜ ಒಡೆಯರ ಕಾಲದಿಂದ ಜಯಚಾಮ ರಾಜೇಂದ್ರ ಒಡೆಯರ್ ಅವರ ವರೆಗೆ ಕನ್ನಡ ಸಾಹಿತ್ಯವು ರಾಜಾಶ್ರಯದಲ್ಲಿ ಹೇಗೆ ಮೈಸೂರು ಪ್ರಾಂತದಲ್ಲಿ ಬೆಳಗಿತ್ತು? ಬ್ರಿಟಿಷರ ಆಡಳಿತದ ಉತ್ತರ ಕರ್ನಾಟಕ ಭಾಗದಲ್ಲಿ ಕನ್ನಡ ಹೇಗೆ ಸೊರಗಿತ್ತು? ಎಂಬುದು ಕನ್ನಡ ಸಾಹಿತ್ಯ ಚರಿತ್ರೆಯ ವಿದ್ಯಾರ್ಥಿಗಳಿಗೆಲ್ಲ ಗೊತ್ತಿರುವ ಸಂಗತಿ. ಕನ್ನಡಕ್ಕೆ ಉದಾರ ಆಶ್ರಯವನ್ನು ನೀಡಿದ ಮೈಸೂರು ಮಹಾರಾಜರುಗಳನ್ನು ಯಾವ ಕನ್ನಡ ಭಕ್ತ ತಾನೆ ಮೆಚ್ಚಿಕೊಳ್ಳದಿರಲು ಸಾಧ್ಯ? ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘ ಹುಟ್ಟಿ ಬೆಳೆದದ್ದು ಚಾಮರಾಜೇಂದ್ರ ಒಡೆಯರ ಉದಾರ ಪೋಷಣೆಯಿಂದ. ಅದರ ಭವನಕ್ಕೆ ಚಾಮರಾಜೇಂದ್ರರ ಹೆಸರೇ ಇದೆ. ಅಂದಿನ ದಿನಗಳಲ್ಲಿ ರಾಜರು ಬೇರೆಯಲ್ಲ ಸರ್ಕಾರ ಬೇರೆಯಲ್ಲ. ಸರ್ಕಾರದ ಸಹಾಯ ಎಂದರೆ ರಾಜರ ಸಹಾಯವೇ. ದಿವಾನರಿಂದ ಮೊದಲ್ಗೊಂಡು ಉನ್ನತಾಧಿಕಾರಿಗಳನ್ನು ನೇಮಕ ಮಾಡುವಲ್ಲಿ ಮಹಾರಾಜರ ಆಜ್ಞೆಯ ಮುದ್ರೆ ಬೀಳಬೇಕಾಗಿದ್ದಿತು. ಮೈಸೂರು ಮಹಾರಾಜರವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಛಾನ್ಸಲರ್ ಆಗಿದ್ದರು ಎಂಬುವನ್ನು ಮರೆಯಬಾರದು. ಆದ್ದರಿಂದ ವಿಶ್ವವಿದ್ಯಾನಿಲಯದಲ್ಲಿ ತಮ್ಮ ಕೊನೆಯ ದಿನಗಳಲ್ಲಿ ಯೂನಿವರ್ಸಿಟಿ ಪ್ರೊಫೆಸರ್ ಎಂಬ ಮೊದಲ ದರ್ಜೆಯ ಪ್ರಾಧ್ಯಾಪಕ ಸ್ಥಾನವನ್ನು ಪಡೆದ ಬಿ. ಎಂ. ಶ್ರೀ.

ಅವರು ಛಾನ್ಸಲರ್‌ರವರಾದ ಮಹಾರಾಜರವರಲ್ಲಿ ಭಕ್ತಿಯನ್ನು ಪ್ರದ
ಸುತ್ತಿದ್ದುದರಲ್ಲಿ ಆಶ್ಚರ್ಯವೇನೂ ಇಲ್ಲ. ಕನ್ನಡ ಸಾಹಿತ್ಯ ಪರಿಷತ್ತಿ
ಅಧ್ಯಕ್ಷ ಸ್ಥಾನ ಮಹಾರಾಜರು ಅಥವಾ ಅವರ ವಂಶದವರಿಗೆ ಮೀ
ಲಾಗಿತ್ತು. ಬಿ. ಎಂ. ಶ್ರೀಯವರು ಕನ್ನಡ ಸಾಹಿತ್ಯ ಪರಿಷತ್ತಿ
ಉಪಾಧ್ಯಕ್ಷರಾದಮೇಲೆ ಅಧ್ಯಕ್ಷರಾದ ಮಹಾರಾಜರವರಿಗೆ ಗೌರ
ತೋರಿಸುತ್ತಿದ್ದುದು ಅಪರಾಧವಲ್ಲ. ಉಪಾಧ್ಯಕ್ಷರಾಗಿದ್ದ ಬಿ. ಎಂ. ಶ್ರೀ
ಯವರು ಮಾತು ಮಾತಿಗೆ, ಕನ್ನಡ ಸಾಹಿತ್ಯ ಅರಮನೆ, ಗುರುಮನೆಗ
ಆಶ್ರಯದಿಂದ ಬೆಳೆಯಬೇಕಾಗಿದೆ ಎನ್ನುತ್ತಿದ್ದರು. ಪರಿಷತ್ತಿ
ರಜತೋತ್ಸವದ ಉದ್ಘಾಟನೆಗೆ ಮಹಾರಾಜರವರನ್ನೇ ಬರಮಾ
ಕೊಂಡದ್ದು ಪರಿಷತ್ತಿಗೆ ಮಾತ್ರವಲ್ಲದೆ ಕನ್ನಡಕ್ಕೇ ಒಂದು ದೊಡ್ಡ ಬ
ವರ್ಧಕವಾಗಿ ಪರಿಣಮಿಸಿತು. ಆಗಿನ ಮಹಾರಾಜರಾದ ನಾಲ್ವಡಿ ಕೃಷ್ಣ
ರಾಜ ಒಡೆಯರು ರಾಜರ್ಷಿ ಎಂದು ಲೋಕಪ್ರಿಯರಾಗಿದ್ದರು. ಮಹಾತ
ಗಾಂಧಿಯವರೇ ಅವರನ್ನು ಆ ಬಗೆಯಲ್ಲಿ ಕೊಂಡಾಡಿದ್ದರು. ಈಗ ಪ್ರಜಾ
ಸರ್ಕಾರದ ಪ್ರೋತ್ಸಾಹವಿಲ್ಲದೆ ಕನ್ನಡ ಹೇಗೆ ಏಳಿಗೆಗೆ ಬರಲಾರದೊ
ಹಾಗೆಯೇ ಅಂದಿನ ದಿನಗಳಲ್ಲಿ ಸರ್ಕಾರಕ್ಕೆ ಕಿರೀಟ ಪ್ರಾಯರಾಗಿದ್ದ
ಮಹಾರಾಜರ ಅನುಗ್ರಹವಿಲ್ಲದೆ ಯಾವ ಕನ್ನಡದ ಕೆಲಸವೂ ನಡೆಯು
ವಂತಿರಲಿಲ್ಲ. ಮೈಸೂರು ವಿಶ್ವವಿದ್ಯಾಲಯದ ಸ್ಥಾಪನೆ, ಕನ್ನಡ ಸಾಹಿತ್ಯ
ಪರಿಷತ್ತಿನ ಸ್ಥಾಪನೆ, ಇವಕ್ಕೆ ಪ್ರತ್ಯಕ್ಷವಾಗಿ ಸರ್. ಎಂ. ವಿಶ್ವೇಶ್ವರಯ್ಯ
ನವರೇ ಕಾರಣರಾದರೂ ಪರೋಕ್ಷವಾಗಿ ಮಹಾರಾಜರ ಬೆಂಬಲ ಇದ್ದೇ
ಇದ್ದಿತು. ಕನ್ನಡದ ಕೆಲಸ ಉನ್ನತ ಮಟ್ಟದಲ್ಲಿ ಏನು ಆಗಬೇಕಾಗಿದ್ದರೂ
ಮೈಸೂರು ಸರ್ಕಾರ ಅರ್ಥಾತ್ ರಾಜರ ಆಶ್ರಯ ಬೇಕೇ ಆಗಿದ್ದಿತು.
ಕನ್ನಡದ ಪುರೋಭಿವೃದ್ಧಿಯನ್ನೇ ತಮ್ಮ ಜೀವದುಸಿರು ಎಂದು ಭಾವಿಸಿದ್ದ
ಬಿ. ಎಂ. ಶ್ರೀ ಅವರು ಮಹಾರಾಜರನ್ನು ಕೊಂಡುಕೊನೆದಿದ್ದರೆ ಅದಕ್ಕೆ
ಅವರ ಕನ್ನಡ ಭಕ್ತಿಯೇ ಕಾರಣ. ಕನ್ನಡ ಭಕ್ತಿಯೇ ರಾಜಭಕ್ತಿಯಾಗಿ
ಪರಿಣಮಿಸಿತ್ತು. ನಾಲ್ವಡಿ ಕೃಷ್ಣರಾಜ ಒಡೆಯರವರು ಸಿಂಹಾಸನಾ-

ರೋಹಣವಾದ ರಜತೋತ್ಸವಸಂದರ್ಭದಲ್ಲಿ ಬರೆದ "ಶ್ರೀ ಕೃಷ್ಣ ರಾಜ ರಜತಮಹೋತ್ಸವ ಪ್ರಗಾಥ", ಮಹಾರಾಜರು ತೀರಿಕೊಂಡಾಗ ಬರೆದ "ಬಾನ್ ಕೊಂಡ ಕೃಷ್ಣನ್" ಎಂಬ ಚರಮಗೀತೆ, "ಶ್ರೀ ಜಯನ ಬೆಳಕು", "ಅರಮನೆಯ ಒಸಗೆ" ಈ ಕವನ ಮಾಲಿಕೆಯಲ್ಲಿ ಶ್ರೀಯವರ ಬೂಟಾಟಿಕೆಯದಲ್ಲದ ನಿಜವಾದ ರಾಜಭಕ್ತಿಯನ್ನು ಗುರುತಿಸಬಹುದು. ಶ್ರೀ ಕೃಷ್ಣರಾಜ ಒಡೆಯರವರ ರಜತೋತ್ಸವವನ್ನು ಕುರಿತು "ಬೆಳ್ಳಿ ಹಬ್ಬದ ಕಬ್ಬದ ಬಳ್ಳಿ" ಎಂದು ಆಗ ತರುಣ ಕವಿಯಾಗಿದ್ದ ಶ್ರೀ ಕೆ. ವಿ. ಪುಟ್ಟಪ್ಪನವರು ಕವನ ಬರೆದಿರುವುದನ್ನು ಜ್ಞಾಪಿಸಿಕೊಳ್ಳೋಣ. ಅವರನ್ನೂ ರಾಜಭಕ್ತರೆಂದು ಹಾಸ್ಯಮಾಡಬಹುದಲ್ಲಾ! ಮೈಸೂರು ಪ್ರಜಾಸ್ತೋಮ ವೆಲ್ಲಾ ರಾಜಭಕ್ತಿಯನ್ನು ಪ್ರದರ್ಶಿಸುತ್ತಿದ್ದ ಕಾಲ ಅದು. ನಾಲ್ವಡಿ ಯವರು ಬಿ. ಎಂ. ಶ್ರೀಕಂಠಯ್ಯನವರಿಗೆ "ರಾಜಸೇವಾಸಕ್ತ" ಎಂಬ ಬಿರುದನ್ನು ಕೊಟ್ಟದ್ದು ಅವರ ರಾಜಭಕ್ತಿಗೆ ಮಾತ್ರವಲ್ಲದೆ ನಾನಾ ರೀತಿ ಯಲ್ಲಿ ಅವರು ಮಾಡಿದ ಕನ್ನಡ ಸಾಹಿತ್ಯ ಸೇವೆಗಾಗಿ. ಬಿ. ಎಂ. ಶ್ರೀ ಯವರು ಮಹಾರಾಜರನ್ನು ಅವರ ವ್ಯಕ್ತಿಘನತೆಗಾಗಿ ಮೆಚ್ಚಿಕೊಂಡಿದ್ದರೇ ಹೊರತು ಕೇವಲ ಅವರು ರಾಜರಾಗಿದ್ದರು ಎಂಬ ಕಾರಣದಿಂದಲ್ಲ. ಪ್ರಾಚೀನ ಕವಿಗಳು ರಾಜಾಶ್ರಯದಲ್ಲಿ ರಾಜರ ಮೆಚ್ಚುಗೆಗಾಗಿ ಕಾವ್ಯ ಬರೆದ ರೀತಿಯನ್ನು ಶ್ರೀಯವರು ವ್ಯಂಗ್ಯವಾಗಿ ಟೀಕಿಸಿರುವುದೂ ಉಂಟು. ಶ್ರೀಯವರ ಈ ಮಾತನ್ನು ಗಮನಿಸಿ: "ರಾಜಸಭೆಗಳಲ್ಲಿ ಸುಖಪುರುಷನಾದ ಪೋಷಕನಿಗೆ ಹೊಗಳುಭಟ್ಟರಾಗಿ ತಮ್ಮೊಳಗೆ ಒಬ್ಬರನ್ನೊಬ್ಬರು ಜರಿ ಯುತ್ತಾ ಸಂಸ್ಕೃತ ಕವಿಗಳನ್ನು ತಲೆಮೆಟ್ಟಿ ಹಾರಿದೆವೆಂದು ಪ್ರತಿಷ್ಠೆ ಕೊಚ್ಚುತ್ತಾ...............ದೊಡ್ಡ ಬಿರುದುಗಳನ್ನೂ ಧನವನ್ನೂ ಅಗ್ರಹಾರ ಗಳನ್ನೂ ಪಡೆಯುವುದಕ್ಕಾಗಿ ಸಂಸ್ಕೃತ ಪಂಡಿತರಾದ ಕವಿಗಳು ಈ ಗ್ರಂಥ ಗಳನ್ನು ಬರೆದದ್ದು. ರಾಜರ ಪ್ರಾಬಲ್ಯ ಮುರಿದುಹೋದಹಾಗೆಲ್ಲ ಈ ಕವಿಗಳ ಅಬ್ಬರವೂ ಅಡಗುತ್ತ ಬಂತು." ಇಲ್ಲಿ ಸುಖಪುರುಷರಾದ ರಾಜರ ಬಗ್ಗೆ ತಿರಸ್ಕಾರ ಭಾವನೆಯ ಧ್ವನಿಯನ್ನು ಗುರುತಿಸಹುದಲ್ಲವೇ ?

ಹೀಗೆ ರಾಜಭಕ್ತಿಯನ್ನು ಪ್ರದರ್ಶಿಸಿದ ಶ್ರೀಯವರು ಜೊತೆ ಜೊತೆಯಲ್ಲೀ ದೇಶಭಕ್ತಿಯನ್ನೂ ಸ್ಪಷ್ಟವಾಗಿ ಪ್ರದರ್ಶಿಸಿದ್ದಾರೆ. ಅಂದಿನ ದಿನಗಳಲ್ಲಿ ಒಡೆದು ಆಳುವ ಬ್ರಿಟಿಷರ ನೀತಿಯಿಂದಾಗಿ ಭಾರತದಲ್ಲಿ ಸಂಸ್ಥಾನಗಳು ಬೇರೆಬೇರೆ ನಡುಗಡ್ಡೆಗಳಂತಾಗಿದ್ದವು. ಸಂಸ್ಥಾನದ ಪ್ರಜೆಗಳು, ಅದರಲ್ಲಿಯೂ ಮಾದರಿ ರಾಜ್ಯವೆಂದು ಹೆಸರಾಗಿದ್ದ ಮೈಸೂರು ಸಂಸ್ಥಾನದ ಪ್ರಜೆಗಳು, ನೆಮ್ಮದಿಯಿಂದ ಇದ್ದರು. ಮಹಾತ್ಮ ಗಾಂಧಿಯವರ ನೇತೃತ್ವದಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮೈಸೂರಿನ ಪ್ರಜೆಗಳಿಗೆ ಮೊದಮೊದಲು ಆಸಕ್ತಿ ಇಲ್ಲದಿದ್ದುದಕ್ಕೆ ಇದೇ ಕಾರಣ. ಇಂಥ ಒಂದು ಸಮಯದಲ್ಲಿ ಬಿ. ಎಂ. ಶ್ರೀಯವರು 1914ರಷ್ಟು ಹಿಂದೆಯೇ "ಭರತಮಾತೆಯ ನುಡಿ" ಎಂಬ ಕವನದಲ್ಲಿ "ಭರತಮಾತೆಯೆ ಭರತಮಾತೆಯೆ ಎಂದು ನೀ ತಲೆ ಎತ್ತುವ ?" ಎಂದು ಪ್ರಾರಂಭಿಸಿ, ಭಾರತದ ಸ್ಥಿತಿಯನ್ನೂ ಭರತಮಾತೆಯ ಮಕ್ಕಳಾದ ನಮ್ಮ ಕರ್ತವ್ಯವನ್ನೂ ಬಹು ಸೂಚ್ಯವಾಗಿ ತಿಳಿಸಿದ್ದಾರೆ.

"ನಿನ್ನ ಧರ್ಮದ ದಿವ್ಯ ಪಥದಲಿ ಬದುಕ ತಿದ್ದದೆ ಹೋದೆವು
ನಿನ್ನ ಸೇವೆಯ ಮರೆತು ನಮ್ಮೊಳೆ ಹೋರಿ ಸೋತವರಾದೆವು;
ನಿನ್ನ ಹೆಸರರಿಗೆ ಕೊಟ್ಟೆವು—ನಿ
ನ್ನನ್ನು ಸಾಕದೆ ಕೆಟ್ಟೆವು"

ಈ ಪದ್ಯದಲ್ಲಿ ಒಳಜಗಳಗಳಿಂದ ಭರತಖಂಡ ಹೇಗೆ ಪರಕೀಯರ ದಾಸ್ಯಕ್ಕೆ ಒಳಗಾಯಿತು ಎಂಬುದನ್ನು ತಿಳಿಸಿದ್ದಾರೆ.

"ಭರತಮಾತೆಯೆ ಭರತಮಾತೆಯೆ ನಿನ್ನ ಮಾತನು ಮರೆಯೆವು
ಹಿರಿಯ ಬಳಗದ ಕಾರ್ಯಚತುರೆಯ ಸಾಕುತಾಯಿಯ
ತೊರೆಯೆವು
ಒಂದೆ ಜನವಾಗಿರುವೆವು – ಒಲಿ
ದೊಂದೆ ಭಾರವ ಹೊರುವೆವು."

ಎಂಬ ಭರತಪುತ್ರನ ಮಾತಿನಲ್ಲಿ ಭಾರತದ ಜನ ಯಾವ ಪ್ರಾಂತದವರೇ ಆಗಿರಲಿ ಒಗ್ಗಟ್ಟಿನಿಂದಿದ್ದು ಭಾರತಮಾತೆಯನ್ನು ರಕ್ಷಿಸುವ ಕರ್ತವ್ಯಭಾರ ವನ್ನು ಹೊರುವ ಭರವಸೆ ನಿಚ್ಚಳವಾಗಿದೆ. ಭರತಮಾತೆಯನ್ನು "ಸಾಕು ತಾಯಿ" ಎಂದು ಕರೆದಿರುವುದರಲ್ಲಿ "ಹೆತ್ತ ತಾಯಿ ಕನ್ನಡ ಮಾತೆ" ಎಂದು ಧ್ವನಿತವಾಗಿದೆ. ಬಿ. ಎಂ. ಶ್ರೀಯವರು ದೇಶಭಕ್ತಿಯನ್ನು ಸ್ಪಷ್ಟವಾಗಿ ಹೇಳಿರುವುದು ಈ ಒಂದೇ ಕವನದಲ್ಲಿಯಾದರೂ ಅವರ "ಇಂಗ್ಲಿಷ್ ಗೀತೆಗಳು" ಕವನ ಸಂಕಲನದಲ್ಲಿ ದೇಶಭಕ್ತಿಯ ಗೀತೆಗಳನ್ನು ಅನುವಾದ ಮಾಡಿ ದೇಶ ಭಕ್ತಿಯ ಮಾದರಿಯನ್ನು ಒದಗಿಸಿರುವುದನ್ನೂ ಗಮನಿಸಬಹುದಾಗಿದೆ. ಬಿ.ಎಂ.ಶ್ರೀಯವರು ತೀರಿಕೊಳ್ಳುವ ವೇಳೆಗೆ ಭಾರತಕ್ಕೆ ಸ್ವಾತಂತ್ರ್ಯ ಲಭಿಸ ದಿದ್ದರೂ ಅದರ ಮುನ್ಸೂಚನೆಗಳಿದ್ದವು. ಆ ವೇಳೆಗೆ ತಮ್ಮ ಸರ್ಕಾರದ ಹುದ್ದೆಯಿಂದ (ಆಗ ವಿಶ್ವವಿದ್ಯಾನಿಲಯದ ಅಧಿಕಾರಿಗಳು, ಅಧ್ಯಾಪಕರು ಎಲ್ಲರೂ ಸರ್ಕಾರದ ನೌಕರರೇ ಆಗಿದ್ದರು ವಿಶ್ವವಿದ್ಯಾನಿಲಯ ಸ್ವಾಯತ್ತ ವಾಗಿರಲಿಲ್ಲ. ಸರ್ಕಾರದ ಅಧಿಕಾರಿಗಳು ಪ್ರಕಟವಾಗಿ ಬ್ರಿಟಿಷರ ವಿರುದ್ಧ ವಾಗಿ ಮಾತಾಡುವಂತಿರಲಿಲ್ಲ.) ನಿವೃತ್ತರಾಗಿದ್ದ ಬಿ. ಎಂ. ಶ್ರೀಯವರು ಸೂಟುಬೂಟಿನ ಪೋಷಾಕನ್ನು ತೊರೆದು ಸಾರ್ವಜನಿಕವಾಗಿ ಕೈಮಗ್ಗದ ಮೇಲುಕೋಟೆ ಅಂಚಿನ ಪಂಚೆಯನ್ನೂ, ಖಾದಿ ಅಂಗಿಯನ್ನೂ ಖಾದಿ ಟೋಪಿಯನ್ನೂ ಧರಿಸಲು ಪ್ರಾರಂಭಿಸಿದ್ದರು. ಇದು ಸಣ್ಣ ವಿಚಾರ ವಾದರೂ ಗಮನಿಸಬೇಕಾದ ಸಂಗತಿ.

ಬಿ. ಎಂ. ಶ್ರೀಯವರು ಮೂಢಭಕ್ತಿಯನ್ನೂ, ಬಾಹ್ಯಾಡಂಬರದ ಕರ್ಮಾಚರಣೆ, ಮೂರ್ತಿಪೂಜೆ ಮುಂತಾದುವನ್ನೆಲ್ಲ ತೊರೆದಿದ್ದರೂ ಅಪೌರುಷೇಯವಾದ ಸನಾತನ ಧರ್ಮದಲ್ಲಿ ತುಂಬಾ ಶ್ರದ್ಧೆಯುಳ್ಳವರಾಗಿದ್ದರು. ಕರ್ಮಸಿದ್ಧಾಂತದಲ್ಲಿ ಅವರಿಗೆ ನಂಬಿಕೆ. ಜೈನ, ವೈದಿಕ, ವೀರಶೈವ ಕನ್ನಡ ಸಾಹಿತ್ಯಗಳನ್ನು ಆಳವಾಗಿ ವ್ಯಾಸಂಗ ಮಾಡಿದ್ದ ಅವರಿಗೆ ಧರ್ಮಸಮನ್ವಯ ದೃಷ್ಟಿ ಕುದುರಿತ್ತು. ಅರಮನೆಗೆ ಹೇಗೋ ಗುರುಮನೆಗೂ (ಅದು ವೀರ ಶೈವವಾಗಿರಲಿ, ಜೈನವಾಗಿರಲಿ, ದ್ವೈತವಾಗಿರಲಿ, ಅದ್ವೈತವಾಗಿರಲಿ) ನಿಷ್ಠೆ

ಯನ್ನು ಉಳ್ಳವರಾಗಿದ್ದರು. ಪರಿಷತ್ತಿಗೆ ಉಪಾಧ್ಯಕ್ಷರಾದಾಗ ಕೆಲವು ಮಠಾಧಿಪತಿಗಳನ್ನು ಕರೆಸಿ ಧರ್ಮವಿಚಾರವಾಗಿ ಉಪನ್ಯಾಸಗಳನ್ನು ಮಾಡಿಸಿದ್ದರು. ನಾನು ಬಲ್ಲಮಟ್ಟಿಗೆ ಅವರಿಗೆ ಬೌದ್ಧ ಧರ್ಮದಲ್ಲಿ ವಿಶೇಷ ಒಲವು ಎಂದು ತೋರುತ್ತದೆ- ಅವರ ಮೇಜಿನ ಮೇಲೆ ಬುದ್ಧನ ವಿಗ್ರಹ ಇದ್ದುದನ್ನು ಅವರ ಮನೆಗೆ ಹೋದಾಗಲೆಲ್ಲ ನಾನು ಕಾಣುತ್ತಿದ್ದೆ. ಅವರ ಶುಕ್ರಗೀತೆಯನ್ನು ಓದಿದರೆ ಸನಾತನ ಧರ್ಮದಲ್ಲಿ ಅವರ ಶ್ರದ್ಧೆ, ಸತ್ಯಪ್ರೀತಿ, ಅಹಿಂಸೆಯಲ್ಲಿ ನಂಬಿಕೆ, ಯುದ್ಧತಿರಸ್ಕಾರ, ಶಾಂತಿಪ್ರೀತಿ ಇವು ವೇದ್ಯವಾಗುತ್ತವೆ. ಈ ನಂಬಿಕೆಯುಳ್ಳವರನ್ನು ನಾಸ್ತಿಕರೆಂದು ಕೆಲವರು ಕರೆದರೆ ನಾವು ಕೆರಳಬೇಕಾಗಿಲ್ಲ. ನನ್ನ ದೃಷ್ಟಿಯಲ್ಲಿ ಅವರು ಈ ವೈಜ್ಞಾನಿಕ ಯುಗದಲ್ಲಿ ಆದರ್ಶಪ್ರಾಯರಾದ ಆಸ್ತಿಕರು.

ಇವರು ಜನದ ಜೊತೆ ಬೆರೆಯುತ್ತಿರಲಿಲ್ಲ, ತುಂಬ ಬಿಗುಮಾನದ ಸ್ವಭಾವದವರು ಎಂಬ ಪ್ರತೀತಿ ಕೆಲವರಲ್ಲಿ ಹಬ್ಬಿತ್ತು. ಅವರು ಒಂದು ನಿಮಿಷವೂ ವ್ಯರ್ಥವಾಗಿ ಗೊಡ್ಡುಹರಟೆಯಲ್ಲಿ ಕಾಲ ಕಳೆಯಲು ಇಷ್ಟಪಡುತ್ತಿರಲಿಲ್ಲ. ಸದಾ ಗ್ರಂಥವಾಚನದಲ್ಲಿ ಮಗ್ನರಾಗಿರುತ್ತಿದ್ದರು. ಆದರೆ ಅವರು ಮೈಸೂರಿನಲ್ಲೂ, ಬೆಂಗಳೂರಿನಲ್ಲೂ ಏರ್ಪಡಿಸುತ್ತಿದ್ದ ಸಂತೋಷ ಕೂಟಗಳನ್ನೂ ಕರೆದಲ್ಲಿಗೆ ಹೋಗಿ ಭಾಷಣಮಾಡುತ್ತಿದ್ದುದನ್ನೂ, ಕೇಳಿದ ಲೇಖಕರಿಗೆಲ್ಲ ಮುನ್ನುಡಿ ಬರೆದು ಕೊಡುತ್ತಿದ್ದುದನ್ನೂ ನೆನೆದರೆ ಅವರು ಮನುಷ್ಯರು ಮುಟ್ಟದ ಗುಬ್ಬಿ ಎಂದು ಹೇಳಲಾಗದು. ಕಡೆಕಡೆಗಂತೂ ಉತ್ತರ ಕರ್ನಾಟಕದ ಪ್ರವಾಸವನ್ನು ವ್ಯಾಪಕವಾಗಿ ಮಾಡಿ ಹೊರನಾಡ ಕನ್ನಡಿಗರ ಪ್ರೀತಿ ಗೌರವಗಳನ್ನು ಗಳಿಸಿಕೊಂಡಿದ್ದರು. ಅವರು ತಮ್ಮ ಕಡೆಗಾಲದಲ್ಲಿ ಧಾರವಾಡಕ್ಕೆ ಹೋಗಿ ನೆಲಸಿದ್ದನ್ನು ಕೆಲವರು ತಪ್ಪಾಗಿ ಅರ್ಥಮಾಡಿಕೊಂಡದ್ದುಂಟು. ಅವರು ತವರು ನಾಡಾದ ಮೈಸೂರು ಸೀಮೆಯಲ್ಲಿ ಜುಗುಪ್ಸೆಗೊಂಡು ತಾವು ಇಲ್ಲಿನ ಜನಕ್ಕೆ ಬೇಕಾಗಿಲ್ಲ ಎಂಬ ಜುಗುಪ್ಸೆಯಿಂದ ಧಾರವಾಡಕ್ಕೆ ಹೋದರು ಎಂದು ಗ್ರಹಿಸಿದ್ದರು. ಇದು ಸತ್ಯಸಂಗತಿಯಲ್ಲ. ಮೈಸೂರು ಕಡೆಯ ಒಬ್ಬ ಮನುಷ್ಯ ಧಾರವಾಡದಲ್ಲಿ

ಹೋಗಿ ನೆಲೆಸಿ ಕನ್ನಡ ಜನರೆಲ್ಲ ಒಂದು ಎಂದು ತಾವು ಆಡುತ್ತಿದ್ದುದ್ದನ್ನು ಮಾಡಿ ತೋರಿಸುವ ಸಲುವಾಗಿ ಅಲ್ಲಿ ಹೋಗಿ ನೆಲಸಿದರು. ಕನ್ನಡ ನುಡಿಯಂತೆ ಅಖಂಡ ಕರ್ನಾಟಕದ ಕಲ್ಪನೆಯೂ ಅವರ ಜೀವದುಸಿರಾಗಿತ್ತು. ಅದನ್ನು ಸ್ಥಾಪಿಸಿ ತೋರಿಸಲೋ ಎಂಬಂತೆ ಉತ್ತರ ಕರ್ನಾಟಕದ ಸಾಂಸ್ಕೃತಿಕ ಕೇಂದ್ರವಾದ ಧಾರವಾಡದಲ್ಲಿ ತಮ್ಮ ಕೊನೆಯುಸಿರನ್ನು ಎಳೆದರು.



---

# "ಶ್ರೀ" ಸ್ಮೃತಿ

ಭೈರವನ ಜವನ ಮಾರಿಯು
ಮೂಱಿಯುಮೊಲ್‌ನಿಂದ ಮಾರಿದತ್ತಂ ಲಲಿತಾ
ಕಾರರ-ಧೀರರ ಬಂದ ಕು
ಮಾರರ ರೂಪಿಂಗೆ ಠಕ್ಕುಗೊಂಡಂತಿರ್ದಂ

ಮೈಸೂರು ಮಹಾರಾಜರವರ ಕಾಲೇಜಿನ ಜೂನಿಯರ್ ಬಿ.ಎ. ತರಗತಿಯ ಗ್ಯಾಲರಿ ಸಭಾಂಗಣದಲ್ಲಿ ಕರ್ಣಾಟಕ ಸಂಘದ ಆಶ್ರಯದಲ್ಲಿ ಒಂದು ಅಪೂರ್ವವಾದ ಸಭೆ. ವಿದ್ಯಾರ್ಥಿಗಳು ಕಿಕ್ಕಿರಿದು ನೆರೆದಿದ್ದಾರೆ. ಕನ್ನಡದ ವಿದ್ಯಾರ್ಥಿಗಳಲ್ಲದೆ ಇತರ ಭಾಷೆ, ವಿಷಯಗಳ ವಿದ್ಯಾರ್ಥಿಗಳು ಸಹ ಕರ್ಣಾಟಕ ಸಂಘದ ವಿದ್ಯಾರ್ಥಿಸದಸ್ಯರಂತೂ ಇದ್ದೇ ಇದ್ದರು. ಮುಂದಿನ ಕುರ್ಚಿಸಾಲಿನಲ್ಲಿ ~~ಪ್ರೊ||~~ ವೆಂಕಣಯ್ಯ, ತೀ. ನಂ. ಶ್ರೀ., ಡಿ. ಎಲ್. ಎನ್., ರಾಳ್ಳಪಲ್ಲಿ ಅನಂತಕೃಷ್ಣಶರ್ಮ, ಇನ್ನೂ ಕೆಲವರು ಅಧ್ಯಾಪಕರು; ಯಾರು ಯಾರು, ಸರಿಯಾಗಿ ನೆನಪಿಲ್ಲ. ಅಂದಿನ ಕಾರ್ಯಕ್ರಮದ ವಿಶೇಷ ಆಕರ್ಷಣೆಗೆ ಪ್ರೇರೆಕಶಕ್ತಿ ಬಿ. ಎಂ. ಶ್ರೀ. ಎಂದು ಬೇರೆ ಹೇಳುವ ಕಾರಣವೇ ಇಲ್ಲ- ಹಾಗೂ ಅವರು ವಾಚನಮಾಡುವರು ಎಂದು ಪ್ರಕಟವಾಗಿದ್ದ ಕೃತಿಯ ಅಪೂರ್ವತೆ. ಆಕೃತಿ ಜನ್ನನ ‹ಯಶೋಧರ ಚರಿತೆ› ಈ ಅಪೂರ್ವಕೃತಿ ಎಂ. ಎ. ರಾಮಾನುಜ ಅಯ್ಯಂಗಾರರ ಕರ್ಣಾಟಕ ಕಾವ್ಯಕಲಾನಿಧಿ ಗ್ರಂಥಮಾಲೆಯಲ್ಲಿ ಪ್ರಕಟವಾಗಿದ್ದರೂ ನಾವು-ನನ್ನಂತಹ ಸಾಮಾನ್ಯ ಕನ್ನಡ ವಿದ್ಯಾರ್ಥಿಗಳು (ಆಗ ನಾನು ಜೂನಿಯರ್ ಬಿ. ಎ. ವಿದ್ಯಾರ್ಥಿ; ಕನ್ನಡವನ್ನು ಐಚ್ಛಿಕ ವಿಷಯವಾಗಿ ಆಯ್ಕೆ ಮಾಡಿಕೊಂಡಿದ್ದರೂ ಸಾಹಿತ್ಯ ಚರಿತ್ರೆಯ ಮಾತು ಹಾಗಿರಲಿ, ಆರ್. ನರಸಿಂಹಾಚಾರ್ಯರ ಕವಿ ಚರಿತ್ರೆಯ ಹಾಳೆಗಳನ್ನೂ ತಿರುವಿಹಾಕಿರಲಿಲ್ಲ)-ಪಂಪ ರನ್ನ ಕುಮಾರವ್ಯಾಸ ಲಕ್ಷ್ಮೀಶರಂತಹ ಪ್ರಸಿದ್ಧಕವಿಗಳ ಹೆಸರುಗಳನ್ನು ಕೇಳಿದ್ದೇವೇ ಹೊರತು ಯಶೋಧರ ಚರಿತೆಯ ಕರ್ತೃ ಜನ್ನನ ಹೆಸರನ್ನು ಕೇಳಿಕೂಡ ಅರಿಯೆವು.

ಅಷ್ಟು ಪರಿಚಿತವಲ್ಲದ ಕೃತಿಯನ್ನು ವಾಚನಕ್ಕಾಗಿ ಬಿ. ಎಂ. ಶ್ರೀ. ಆರಿಸಿ ಕೊಳ್ಳಬೇಕಿದ್ದರೆ ಅದರಲ್ಲಿ ವಿಶೇಷ ಮಹತ್ವ ಇರಲೇ ಬೇಕು ಎಂದು ನಮ್ಮ ಸಕಾರಣವಾದ ಕಲ್ಪನೆ.

ಈಚಿನ ದಿನಗಳಲ್ಲಿ ಜನ್ನನ ಯಶೋಧರ ಚರಿತೆಯ ಸಂಗ್ರಹ ಕಾವ್ಯ-ಪ್ರೇಮಿಗಳಿಗೆ ಅತ್ಯಂತ ಪ್ರಿಯವಾದ ಕಾವ್ಯವಾಗಿ ಪರಿಣಮಿಸಿದೆ. ಇದರ ಶ್ರೇಯಸ್ಸು ಶ್ರೀ ಅವರಿಗೆ ಸಲ್ಲಬೇಕು. ಶ್ರೀಯವರು ಕೃತಿಯ ಕಾವ್ಯಗುಣ ವನ್ನೂ ನಾಟಕೀಯತೆಯನ್ನೂ ಗುರುತಿಸಿ, ತಾವು ಸವಿದ ಕಾವ್ಯರಸವನ್ನು ಇತರರೊಂದಿಗೆ ಹಂಚಿಕೊಂಡಲ್ಲದೆ ಅವರಿಗೆ ಸಮಾಧಾನವಾಗುತ್ತಿರಲ್ಲಿಲ್ಲ ಎಂದು ಕಾಣುತ್ತದೆ. ಹಳಗನ್ನಡ ಕಾವ್ಯಗಳ ರಸವತ್ತಾದ ಭಾಗಗಳನ್ನು ಸಹೃದಯರೊಂದಿಗೆ ಹಂಚಿಕೊಳ್ಳುವ ಉದ್ದೇಶದಿಂದ ಕಾವ್ಯವಾಚನ ಮಾಡುವುದನ್ನು ತಮ್ಮ ಬದುಕಿನ ಒಂದು ನೋಂಪಿಯಾಗಿ ಸ್ವೀಕರಿಸಿದ್ದರು. ನಾನು ಬಲ್ಲಮಟ್ಟಿಗೆ, ನಾನು ಮೇಲೆ ಪ್ರಸ್ತಾವಿಸಿದ ಕಾರ್ಯಕ್ರಮವೇ ಅವರ ಸಾರ್ವಜನಿಕ ಕಾವ್ಯವಾಚನ ಕಾರ್ಯಕ್ರಮಗಳಲ್ಲಿ ಮೊತ್ತಮೊದಲನೆಯದು. ವೇದಿಕೆಯ ಮೇಲೆ ಮುಖಾಮುಖಿಯಾಗಿ ಶ್ರೀ ಯವರನ್ನು ನಾನು ಕಂಡದ್ದು ಅದೇ ಮೊದಲಸಲ. ಅದಕ್ಕೂ ಮೊದಲು ನಾನು ಮೈಸೂರಿನ ಡಿ.ಬನುಮಯ್ಯ ನವರ ಕೊಲಿಜಿಯೆಟ್ ಹೈಸ್ಕೂಲಿನಲ್ಲಿ ಜೂನಿಯರ್ ಇಂಟರ್ ಮಿಡಿಯಟ್ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ (1928 ರಲ್ಲಿ) ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರ್ ಆಗಿದ್ದ ಬಿ. ಎಂ. ಶ್ರೀಕಂಠಯ್ಯನವರು ಕನ್ನಡ ಪಾಠ ಪ್ರವಚನದ ಪರೀಕ್ಷಕರಾಗಿ ಬಂದಿದ್ದರು. ಆಗ ನಮಗೆ ಪಾಠ ಮಾಡುತ್ತಿದ್ದವರು ಕಾನಕಾನಹಳ್ಳಿ ವರದಾಚಾರ್ಯರು. ಅವರು 'ಶ್ರೀ' ಯವರ ಗುರುವೂ ಆಗಿದ್ದರು ಎನ್ನುವುದು ಆ ಸಂದರ್ಭದಲ್ಲಿಯೇ ನನಗೆ ಮನವರಿಕೆಯಾದದ್ದು. ಆ ಸಂದರ್ಭದಲ್ಲಿ ಶ್ರೀಯವರು ನಡೆದುಕೊಂಡ ರೀತಿ ಅವರ ಗುರುಭಕ್ತಿಯನ್ನು ಕಣ್ಣಿಗೆಕಟ್ಟುವಂತೆ ಪ್ರದರ್ಶಿಸಿತು. ಆ ಸನ್ನಿವೇಶದ ನೆನಪು ಅರ್ಧಶತಮಾನವಾದಮೇಲೂ ನಿನ್ನೆ ನಡೆದ ಸಂಗತಿ ಎನ್ನುವಹಾಗೆ ಹಚ್ಚಹಸಿರಾಗಿ ಉಳಿದು ಬಂದಿದೆ. ★

★ ಈ ಸಂದರ್ಭವನ್ನು ಮೊದಲ ಲೇಖನದಲ್ಲಿ ವರ್ಣಿಸಿದೆ (ನೋಡಿ : ಪು. 3-4)

ಬಿ. ಎಂ. ಶ್ರೀ. ಅವರಿಗೆ ವರದಾಚಾರ್ಯರು ಕನ್ನಡ ಪಾಠ ಹೇಳಿ, ಅವರಿಗೆ ಹಳಗನ್ನಡ ಕಾವ್ಯದಲ್ಲಿ ಅಕ್ಕರೆ ಹುಟ್ಟಿಸಿದರು ಎಂದು ಈ ಪ್ರಸಂಗದಿಂದ ನನಗೆ ಮನವರಿಕೆಯಾಯಿತು. ಅಂದು, ಗುರುಗಳ ಪಾಠವನ್ನು ಎಂದಿನಂತೆಯೇ ನಾನು ಗಮನವಿಟ್ಟು ಕೇಳುತ್ತಿದ್ದೆನಾದರೂ ನಾನು ಆಗಾಗ್ಗೆ ಬಿ. ಎಂ. ಶ್ರೀ- ಯವರ ಮುಖದ ಕಡೆಗೆ ದೃಷ್ಟಿ ಹಾಯಿಸುತ್ತಿದ್ದೆ. 1927 ರಲ್ಲಿ ನಾನು S.S.L.C. ತರಗತಿಯ ವಿದ್ಯಾರ್ಥಿಯಾಗಿದ್ದಾಗ ತೀ. ನಂ. ಶ್ರೀ. ಅವರಿಂದ ನನಗೆ ನನ್ನ ಹುಟ್ಟುಹಬ್ಬದ ಉಡುಗೊರೆಯಾಗಿ ಕೈಗೆ ಬಂದಿದ್ದ ಇಂಗ್ಲಿಷ್ ಗೀತಗಳನ್ನು ಓದಿ ಪ್ರಭಾವಿತನಾಗಿದ್ದ ನನಗೆ★ದರ ಆ ಕರ್ತೃವನ್ನು ನೋಡುವ ಹೆಬ್ಬಯಕೆ. ಅದು ತೀರಿತು ಅಂದು. ಕವಿ ಚೆಲುವನಾಗಿರಲೇ ಬೇಕು, ಅವನ ಮುಖದಲ್ಲಿ ದಿವ್ಯವಾದ ಕಳೆ ತುಂಬಿರಬೇಕು ಎನ್ನುವ ನನ್ನ ತಾರುಣ್ಯದ ಕಲ್ಪನೆ ಹುಸಿಯಾಗಲಿಲ್ಲ. ಅವರ ಮುಖದ ಸೊಬಗಿನ ವಿವರಗಳನ್ನು ನಾನೇ ವರ್ಣಿಸಬಹುದು. ಆದರೆ ಈ ಮಾತಿನ ಚಿತ್ರಾರ ಬಿಡಿಸುವ ಕಸುಂಗೆಲಸವನ್ನು 'ಶ್ರೀ'ಯವರ ಪರಮ ಶಿಷ್ಯರಲ್ಲಿ ಒಬ್ಬರಾದ, ನನ್ನ ಗುರುಸ್ಥಾನೀಯರಾದ ಡಾ|| ಎಸ್. ವಿ. ರಂಗಣ್ಣನವರು ಈಗಾಗಲೇ ಅನನುಕರಣೀಯವಾಗಿ ಮಾಡಿಬಿಟ್ಟಿರುವುದರಿಂದ ನಾನು ಅದಕ್ಕೆ ಕೈಹಾಕಿ ಸೋಲುವುದಕ್ಕೆ ಇಷ್ಟಪಡುವುದಿಲ್ಲ. ಆದ್ದರಿಂದ, ಅವರ ಎದೆತುಂಬಿ ಬಂದ ಮಾತುಗಳನ್ನು ಉದ್ಧರಿಸಿ, ಅವರ ಮಾತಿನಲ್ಲಿ ಅತ್ಯುಕ್ತಿ ಇಲ್ಲ, ಅದು ಸ್ವಭಾವೋಕ್ತಿ ಎಂದು ಹೇಳಿ ಅದನ್ನು ಸಮರ್ಥಿಸಿ ಸಂತೋಷಪಡುತ್ತೇನೆ :

" ದುಂಡುದುಂಡಾದ, ಮಧ್ಯ ಎತ್ತರದ, ಭವ್ಯ ದೇಹಾಕೃತಿ ; ಅಗಲವಾದ ನಸುಗೆಂಪಿನ, ಗಂಭೀರ ಹಣೆ ; ಉಬ್ಬಿದ ತಿಳಿಗೆಂಪಿನ ಲವಲವಿಕೆಯ

---

★ಇಂಗ್ಲಿಷ್ ಗೀತಗಳ ಪ್ರಭಾವಕ್ಕೆ ಒಳಗಾಗಿ ನಾನು 1928, 1929ರಲ್ಲಿ ಬರೆದ ಅನುವಾದಿತ ಹಾಗೂ ಸ್ವತಂತ್ರ ಕವನಗಳು ಹಲವನ್ನು 'ಮೊದಲ ಹೆಜ್ಜೆ' (1982) ಎಂಬ ಹೆಸರಿನಲ್ಲಿ ಪ್ರಕಟಿಸಿದ್ದೇನೆ (ರಾಘವ ಪ್ರಕಾಶನ, ಬೆಂಗಳೂರು-19 ; ಬೆಲೆ ರೂ. 5-00).

ಕೆನ್ನೆಗಳು ; ತೀಕ್ಷ್ಣವೂ ಆಲೋಚನಾಪೂರಿತವೂ ಅತ್ಯುತ್ಸಾಹ ಸೂಚಕವೂ ನಗುವನ್ನು ಸೂಸುವುದೂ ಆದ ಉಜ್ಜ್ವಲ ಕಾಂತಿಯ ಕಣ್ಣುಗಳು ; ಸ್ವಲ್ಪ ಸಣ್ಣದಾದರೂ ಮುಖಕ್ಕೆ ಮುದ್ದಾಗಿ ಹೊಂದಿಕೊಂಡ ನಾಸಿಕ ; ಮಂದಸ್ಮಿತದಿಂದ ಕೂಡಿದ್ದರೂ ದೃಢತೆ ಕಾಠಿಣ್ಯಗಳನ್ನು ವ್ಯಕ್ತಪಡಿಸುವ ಸ್ಪಷ್ಟ ತುಟಿಗಳು; ಕೆಳಗಲ್ಲದ ಹಿಂಬದಿಯಿಂದ ಮೇಲಕ್ಕೆದ್ದು, ಕೆಳಗುಳಿಯೊಂದರಿಂದ ಕೊಂಚ ಇಬ್ಬಗೆಯಾದ ನುಣ್ಣನೆಯ ರಂಜಕ ಗಲ್ಲ ; ಎಲ್ಲಕ್ಕಿಂತ ಮಿಗಿಲಾಗಿ, ಲೋಚನಾಗ್ರದಿಂದ ಅವುಡಿನವರೆಗೆ ಇಳಿದುಬಂದು, ಕವುಳುಗಳನ್ನು ಮೂಗು ಬಾಯಿಗಳಿಂದ ಪ್ರತ್ಯೇಕಿಸುತ್ತ, ಗೆಲವಿನಿಂದ ಕೂಡಿದ ಎರಡು ಗೀರುಗಳು: ಒಟ್ಟನಲ್ಲಿ ಒಂದುಸಾರಿ ನೋಡಿದರೆ ಸಾಕು, ಪ್ರೇಕ್ಷಕನ ಚಿತ್ತಭಿತ್ತಿಯಲ್ಲಿ ಕೊರೆದು ನಿಲ್ಲುವ, ಅಂಭಾರಿ ಆನೆಯಂದದ, ಠೀವಿಯ ಮುಖಮುದ್ರೆ ; ಏರಲೂ ಬಲ್ಲ ಇಳಿಯಲೂ ಬಲ್ಲ, ಇಂಪಾದ ಕುಗ್ಗದ ದನಿ ; ಆಗಾಗ ಮೇಲಕ್ಕೆದ್ದು, ಪ್ರತಿಪಾದಿಸುವ ಅಂಶವನ್ನು ಒತ್ತಿ ಹೇಳುವ ಭಂಗಿಯನ್ನು ತಾಳುವ, ಉಚಿತಾಕಾರದ, ದುಂಡಾದ ಕೈಗಳು ; ತಾವರೆಯಂತೆ ಕೆಂಪಾಗಿ ಕೋಮಲವಾದ ಅಂಗೈ ; ಹಾಗೆಯೇ ರಕ್ತ ಸೋರುತ್ತದೆಯೋ ಎನ್ನುವಂತೆ ಕಾಣುತ್ತಿದ್ದ ಶುಭ್ರಸುಂದರವಾದ ಹೆಜ್ಜೆಗಳು ;.... ಆ ಅಂಗೈ ಆ ಅಂಗಾಲನ್ನು ಹತ್ತಿರ ಕುಳಿತು ದರ್ಶಿಸಿದವನು ಧನ್ಯ ; ಏತಕ್ಕೆಂದರೆ ಅವುಗಳಮೇಲೆ ನಿಷ್ಕಳಂಕಿಯ ಸಂಯಮಶಾಲಿಯ, ತಪಸ್ವಿಯ, ಗುರುತು ಸ್ವಚ್ಛವಾಗಿ ಒತ್ತಿದಂತಿದ್ದಿತು."

ರಂಗಣ್ಣನವರ ವರ್ಣನೆ 'ಶ್ರೀ' ಯವರು ತೀರಿಕೊಂಡಮೇಲೆ 1948 ರಲ್ಲಿ ಬರೆದದ್ದು.★ ನೆನಪಿನಿಂದ ಬರೆದದ್ದು. ಆದರೆ ಮಾಸದ ನೆನಪು. ಯಾರೇ ಆಗಲಿ, ಒಂದು ಸಲ ನೋಡಿದರೆ ಸಾಕು, 'ಶ್ರೀ' ಯವರ ಮುಖಮುದ್ರೆ ನೋಡಿದವರ ಮನಃಪಟಲದಮೇಲೆ ಅಚ್ಚೊತ್ತಿ ನೆನಪಿನಲ್ಲಿ ನಿಲ್ಲು

---

★ 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' (ಭಾಗ ೧) ; ಮೈಸೂರು ; 1948 ; ಪೀಠಿಕೆ ಪು. XIV.

ಪಂಥದು. ಅವರ ನೆಚ್ಚಿನ ಶಿಷ್ಯರು ಅವರನ್ನು ನೂರಾರು ಸಲ ನೋಡಿರ ತಕ್ಕವರು. ಕನ್ನಡ ತಾಯಿ ಕೃಪೆಯಿಂದ ನನಗೂ ಈ ಭಾಗ್ಯ ಲಭಿಸಿದೆ. 'ಆರಂಕುಸವಿಟ್ಟೊಡಂ ನೆನೆವುದೆನ್ನ ಮನಂ ಗುರುವರ್ಯನಾಸ್ಯವಂ.' ಈ ಆಸ್ಯವನ್ನು, ಕೆಂದಾವರೆಮೊಗವಂ, ನೋಡಿದಾಗ, "ತಾವರೆಯ ಹೊಸ ಕೆಂಪು, ತಾವರೆಯ ಹೊಸ ಅರಳ ಹೊಳೆವಕೆಂಪು" ಎಂಬ ಶ್ರೀಯವರ ಗೀತ ವೊಂದರ ಸಾಲು ನೆನಪಿಗೆ ಬರುತ್ತದೆ. ಮುಖದ ಕೆಂಪು ಸರಿಯೆ. ಅವರ ಅಂಗೈ ಅಂಗಾಲುಗಳ ರಕ್ತ ಚಿಮ್ಮುವ ಕೆಂಪನ್ನು ಕಾಣಬೇಕಾದರೆ ಅವರು ಸಾಧಾರಣ ಮನೆಯುಡುಪಿನಲ್ಲಿ ಕುಳಿತಿದ್ದಾಗಲೋ ಶತಪಥ ತಿರುಗುತಿದ್ದಾ ಗಲೋ ನೋಡಬೇಕಿತ್ತು. ಮನೆಯಲ್ಲಿ ಅವರ ಉಡುಪು ಎಂದರೆ, ಅಚ್ಚ ಬಿಳಿಯ ಟ್ವಿಲ್‌ಬಟ್ಟೆಯ ಷರಟು; ಮೇಲುಕೋಟೆ ಗುಂಡಂಚಿನ ತಡಪು ಸುತ್ತಿದ ಪಂಚೆ. ಅವರು ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ನಾನು ಅಲ್ಲಿ ಸಹಾಯಕ ಕಾರ್ಯದರ್ಶಿ. ಕಚೇರಿಯ ಕೆಲಸಕ್ಕಾಗಿ ಅವರ ಮನೆಗೆ ಹೋದಾಗಲೆಲ್ಲ ಅವರನ್ನು ನಾನು ಕಾಣುತ್ತಿದ್ದದ್ದು ಇದೇ ಉಡುಪಿನಲ್ಲಿ. ಇಂಥ ಸನ್ನಿವೇಶವಲ್ಲಿ ಅವರ ನಡೆ ನುಡಿ ಎಲ್ಲ ತೀರ ಸರಳ; ಸಲಿಗೆಯ ಮಾತು, ಎಷ್ಟು ಬೇಕೋ ಅಷ್ಟು "ಇನ್ನೇನೂ ಇಲ್ಲವಲ್ಲ" ಎಂದಾಗ ಅವರ ಇಂಗಿತವರಿತ ನಾನು, 'ಬರ್‍ತೀನಿ' ಎಂದು ಹೇಳಿ, ಹೊರಟುಬಿಡುತ್ತಿದ್ದೆ.

ವೇದಿಕೆಯ ಮೇಲೆ ನಿಂತು ತರಗತಿಯ ಪಾಠವೇ ಆಗಲಿ, ಸಾರ್ವಜನಿಕ ಭಾಷಣವೇ ಆಗಲಿ, ಜರಿಯ ಪೇಟ ಧರಿಸಿ ಸೂಟುಧಾರಿಯಾದ ಅವರ ಜರ್ಬೇ ಜಬರ್ದಸ್ತು. ಜಂಬವಿಲ್ಲದ ಜಬರ್ದಸ್ತು. ರಾಜಗಾಂಭೀರ್ಯ. ವಾಗ್ ವಿಲಾಸವನ್ನು ಮೆರೆಯಲು ಧರೆಗಿಳಿದ ವಾಚಸ್ಪತಿ.

ಬಿ. ಎಂ. ಶ್ರೀ. ಅವರು ಯಶೋಧರ ಚರಿತೆಯನ್ನು ವಾಚನಮಾಡಿದ ಸಂಗತಿಯನ್ನು ಈ ಮೊದಲೇ ಪ್ರಸ್ತಾವಮಾಡಿದ್ದೇನೆ. ಆಗಲೇ ನಾನು ಅವರನ್ನು ವೇದಿಕೆಯಮೇಲೆ ಮೊದಲಸಲ ಕಂಡದ್ದು. "ಮಾರಿದತ್ತಂ ಲಲಿತಾಕಾರದ ಬಂದ ಕುಮಾರರ ರೂಪಿಂಗೆ ಠಕ್ಕುಗೊಂಡತಿರ್ದಂ ಎಂಬ

ಮಾತನ್ನು ಅವರು ವಾಚಿಕಾಭಿನಯಪೂರ್ವಕವಾಗಿ ಉಚ್ಚರಿಸಿದ ಬಗೆ ಇಂದಿಗೂ ನನ್ನ ಕಿವಿಯಲ್ಲಿ ಮೊರೆಯುತ್ತಿದೆ. 'ಠಕ್ಕು' ಎಂಬ ಪದದ ಉಚ್ಚಾರಣೆಯು ಕಾಕುವಿನಲ್ಲಿ ಕುಮಾರರ ರೂಪನ್ನು ಕಂಡು ಬೆರಗಾಗಿ ಮೂಗುವಟ್ಟು ಕರವಾಳದಿಂದ ಪೊಯ್ಯದೆ ನಿಂತ ಮಾರಿದತ್ತನ ಚಿತ್ರ ನನ್ನ ಒಳಗಣ್ಣಮುಂದೆ ನಿಚ್ಚಳವಾಗಿ ಸುಳಿಯಿತು. ಯಶೋಧರ ಚರಿತೆಯ ಈ ಪದ್ಯವನ್ನು ಓದಿದಾಗಲೆಲ್ಲ ಮಾರಿದತ್ತನ ಭಂಗಿಯೊಂದಿಗೆ 'ಶ್ರೀ'ಯವರ ಕಂಠಶ್ರೀಯ ಪಲುಕುಗಳೂ ಮನಸ್ಸಿನಲ್ಲಿ ಮರುಕೊಳಿಸುತ್ತವೆ. ಅಂತೆಯೆ, ಮೃತ್ಯು ಸಂಮುಖದಲ್ಲಿ ನಿಯತಿಯ ಅನಿವಾರ್ಯತೆಯ ಬಗೆಗೆ ಅಭಯರುಚಿ ಅಭಯಮತಿಗೆ—"ನಿಯತಿಯನಾರ್ ಮೀರಿದಪರ್, ಭಯಮೇವುದೊ, ಮುಟ್ಟಿದೆಡೆಗೆ ಸೈರಿಸುವುದೆ"— ಎಂದು ಹೇಳಿದ ಸಮಾಧಾನದ ಮಾತನ್ನಾಗಲಿ; ಅಣ್ಣನ ಮಾತಂ ಮನದೊಳ್ ತಿಣ್ಣನೆ ತಳೆದು" "ಭವಪ್ರಕೃತಿ ವಿಕೃತಿ" ಯನ್ನು ಅರಿತ ತಂಗಿ ಅಣ್ಣನಿಗೆ—

ಎನಿತೊಳವಪಾಯಕೋಟಿಗ
ಳನಿತರ್ಕಂ ಗೇಹಮಲ್ತೆ ದೇಹಮಿದಂ ನೆ
ಟ್ಟನೆ ಪೊತ್ತು ಸುಖಮನರಸುವ
ಮನುಜಂ ಮೊರಡಿಯೊಳೆ ಮಾದುಫಳಮನರಸದಿರಂ.

ಬೇಡಿದ ಕಾಡೊಳ್ ಮಳೆಯಾ
ಯ್ತೋಡಾಡುವಮಿದರ ಪೊರೆಯನೆನಗಂ ನಿನಗಂ
ಮೂಡುವ ಮುಳುಗುವ ದಂದುಗ
ಮಾಡಿದ ಪೊಲನುಂಡ ಮರ್ದು ಕಂಡ ವಿಚಾರಂ.

ಎಂದು ಅಣ್ಣನಿಗೆ ಹೇಳಿದ ವೈರಾಗ್ಯದ ಮಾತನ್ನಾಗಲಿ; "ಪುಳಿಂದನ ಕಣ್ಗಟ್ಟಿನಿಂದ ವನಹರಿಣಿ" ಅಮೃತಮತಿ—

ಕರಿದಾದೊಡೆ ಕತ್ತುರಿಯಂ
ಮುರುಡಾದೊಡೆ ಪುಲಯಜಂಗಳಂ ಕೊಂಕಿದೊಡೇಂ
ಸುರಚಾಪಮುನಿಳಿಕ್ಕೆವರೆ
ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್

ಒಲವಾದೊಡೆ ರೂಪಿನ ಕೋ
ಟಲೆಯೇವುದು ಕಾರ್ಯವಾಗೆ ಕಾರಣದಿಂದಂ
ಫಲಮೇನ್ ಇಂದೆನಗಾತನೆ
ಕುಲದೈವಂ ಕಾಮದೇವನಿಂದ್ರಂ ಚಂದ್ರಂ

ಎಂದು, ಗೆಳತಿ ಅಷ್ಟವಂಕನ ಕುರೂಪವನ್ನು ವರ್ಣನೆಮಾಡಿದಾಗ ಒಲವಿಗೆ ತೆತ್ತ ಮನಸ್ಸನ್ನು ಗಟ್ಟಿಮಾಡಿ ತನ್ನ ನಿಲುವನ್ನು ಸಮರ್ಥಿಸಿ ಆಡಿದ ತರ್ಕ ಬದ್ಧವಾದ ಮಾತನ್ನು ತಾವೂ ಒಪ್ಪುವಂತೆ ಒತ್ತುಕೊಟ್ಟು ಓದಿದಾಗ ಆಗಲಿ; ಪ್ರಿಯ ಪತ್ನಿಯ ಅಪಾತ್ರ ಪ್ರಣಯದ ದುರ್ವ್ಯವಹಾರವನ್ನು ಕಣ್ಣಾರೆಕಂಡು ಮನಸ್ಸು ರೋಸಿ, ಅವಳನ್ನೂ ಅವಳ ಮಿಂಡನನ್ನೂ ತನ್ನ ಖಡ್ಗದಿಂದ ಎರಡು ತುಂಡು ಮಾಡಬೇಕೆಂದು ಮನದಂದು "ಆಗಳ್ ಬಾಳ್ ನಿಮಿರ್ದುದು ತೋಳ್ ತೂಗಿದುದು, ಆದರೂ ಧೃತಿ ಬಂದು, ಆ ಹುಳುಕರನ್ನು ಇರಿಯ ಲೊಲ್ಲದೆ ಹೇಸಿ ಹಿಂದಿರುಗಿದ ಸನ್ನಿವೇಶವನ್ನು ಸಾಭಿನಯವಾಗಿ ಓದಿದಾಗ ಆಗಲಿ; ಇಂಥ ಯಾವ ಯಾವ ರಸವತ್ಸನ್ನಿವೇಶಗಳು ಕಾವ್ಯದಲ್ಲಿ ಉಂಟೋ ಅವನ್ನು ಮಾತ್ರ ಆಯ್ದುಕೊಂಡು, ನಡುನಡುವೆ ಕಥೆಯ ಸೆರಣಿಯ ಕುಣಿಕೆಗಳನ್ನು ಪರಿಚಯಮಾಡಿಕೊಡುತ್ತ, ರಸಭಾವಾನುಗುಣ ವಾಗಿ ದನಿಯನ್ನು ಏರಿಸುತ್ತಾ ತಗ್ಗಿಸುತ್ತಾ, ತಾವೇ ಸ್ವತಃ ರಸಾನಂದ ವನ್ನು ಅನುಭವಿಸಿದಾಗ ಕ್ಷಣಕಾಲ ಕಣ್ಣನ್ನು ಮುಚ್ಚುತ್ತ, ಇಡಿಯ ಕಾವ್ಯ ವನ್ನು ಓದಿದ ರೀತಿ, ಸಾಹಿತ್ಯ ವಿದ್ಯಾರ್ಥಿಯಾದ ನನ್ನ ಬದುಕಿನಲ್ಲಿ ನಾನು ಪಡೆದ, ಮರೆಯಲಾಗದ ಸಂಗತಿ.

ಕೆಲವು ವರ್ಷಗಳಾದರೂ ಅವರು ಜನ್ನನ ಯಶೋಧರ ಚರಿತೆಯನ್ನು ಅಧ್ಯಾಪಕರು ಮತ್ತು ವಿದ್ಯಾರ್ಥಿಗಳ ನಡುವೆ ಮಾತ್ರವಲ್ಲದೆ ಸಾಮಾನ್ಯ ಜನಕ್ಕೂ ಓದಿ ತಿಳಿಯಹೇಳುವ ಕರ್ತವ್ಯವನ್ನು ಹೊತ್ತಂತೆ ಕಾಣುತ್ತದೆ. ಅವರು ರಿಜಿಸ್ಟ್ರಾರ್ ಮತ್ತು ಗೌರವ ಕನ್ನಡ ಪ್ರಾಧ್ಯಾಪಕರಾಗಿದ್ದ ಕಾಲದಲ್ಲಿಯೇ UTA (ಊಟ: ಯೂನಿವರ್ಸಿಟಿ ಟೀಚರ್ಸ್ ಅಸೋಸಿಯೇಷನ್) ಪ್ರಾರಂಭವಾದದ್ದು. 'ಊಟ' ಹೆಸರು ಎರಡು ಅರ್ಥಗಳಲ್ಲಿ ಸಾರ್ಥಕವಾಯಿತು. ಕನ್ನಡ ಕಾವ್ಯ ಪ್ರಸಾರ, ಜ್ಞಾನಪ್ರಸಾರ, ಇವೆರಡೂ ಅದರ ಕಾರ್ಯಗಳು. ಕೆಲವು ವರ್ಷ ಕಾಲ ಡಾ|| ಜಿ. ಹನುಮಂತರಾಯರು 'ಊಟ'ದ ನೇತಾರರಾಗಿದ್ದುಕೊಂಡು ಭರ್ಜರಿಯಾದ ಊಟದ ವ್ಯವಸ್ಥೆ ಮಾಡುತ್ತಿದ್ದರು; ಉಪನ್ಯಾಸಗಳು ವಿಶೇಷವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ನಡೆಯುತ್ತಿದ್ದುವು. ಊಟದ ವ್ಯವಸ್ಥೆ ಬಲವಾದ ಆಕರ್ಷಣೆ; ಪೂರ್ವ ವಯಸ್ಸಿನ ಅಧ್ಯಾಪಕರು 'ಊಟ'ದ ಪ್ರವಾಸಗಳಲ್ಲಿ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಬಿ. ಎಂ. ಶ್ರೀ. ಯವರು ಕಾರ್ಯಗೌರವದಿಂದ ಹೆಚ್ಚಾಗಿ ಈ ಕಾರ್ಯಗಳಲ್ಲಿ ಭಾಗವಹಿಸುತ್ತಿರಲಿಲ್ಲವೆಂದು ಕಾಣುತ್ತದೆ. ಈಚೆಗೆ ನಾನು ದೊಡ್ಡಬಳ್ಳಾಪುರಕ್ಕೆ ಒಂದು ಶಾಲೆಯ ವಾರ್ಷಿಕೋತ್ಸವದಲ್ಲಿ ಉಪನ್ಯಾಸಮಾಡಲು ಹೋಗಿದ್ದಾಗ ಅಲ್ಲಿನ ಪ್ರಮುಖರೊಬ್ಬರು, ಬಹಳ ವರ್ಷಗಳ ಹಿಂದೆ ಬಿ. ಎಂ. ಶ್ರೀ. ಅವರು ದೊಡ್ಡಬಳ್ಳಾಪುರಕ್ಕೆ ಬಂದಿದ್ದು 'ಯಶೋಧರ ಚರಿತೆ' ಯನ್ನು ಕುರಿತು ಭಾಷಣ ಮಾಡಿದರೆಂದೂ ದೊಡ್ಡ ಸಭೆ ನೆರೆದಿತ್ತೆಂದೂ ತಿಳಿಸಿದರು. ಈ ಕೃತಿ ಕುರಿತು ಇನ್ನೂ ಎಷ್ಟೋ ಕಡೆ ಭಾಷಣ ಮಾಡಿರಬೇಕು. ಅದು ಹೇಗಿದ್ದರೂ, ಯಶೋಧರ ಚರಿತೆ ಅವರ ಅಚ್ಚುಮೆಚ್ಚಿನ ಕಾವ್ಯಗಳಲ್ಲಿ ಒಂದು. ನಮಗೆ ಸಾಹಿತ್ಯ ಚರಿತ್ರೆಯನ್ನು ಕುರಿತು ಪಾಠ ಮಾಡುವಾಗಲೂ ಯಶೋಧರ ಚರಿತೆಯನ್ನು ಕಂಡರೆ ಒಂದು ಬಗೆಯ ಪಕ್ಷಪಾತ ಇತ್ತು ಎಂದು ವ್ಯಕ್ತಪಟ್ಟಿತ್ತು. ಪಾಠದ ವೇಳೆಯಲ್ಲಿ ಕಾವ್ಯದ ಬೆಲೆ ಕಟ್ಟುವ ಮಾತು ಬಂದಾಗ ಅವರ ಅಗ್ರವೀಳ್ಯ ಪಂಪನಿಗೆ. ರನ್ನನ ಗದಾಯುದ್ಧದ ಪ್ರಸ್ತಾಪ ಬಂದಾಗ, ಅಜಿತಪುರಾಣ ಪಂಪನ ಆದಿಪುರಾಣಕ್ಕೆ ಸರಿದೊರೆ ಎನ್ನಿಸದು, ಆದರೆ ಗದಾಯುದ್ಧದ ವಿಷಯ

ಬೇಕೆ, ಎಂದು ಪಂಪನನ್ನೂ ಪುರೆಯುವಂತೆ ಮಾಡಿ "ದುರಂತ ದುರ್ಯೋಧನ"ಪಾತ್ರ ಸೃಷ್ಟಿಗಾಗಿ ರನ್ನನಿಗೆ ಮುಕ್ತಕಂಠದ್ಯುಮಣಿಹಾರ. ಕುಮಾರವ್ಯಾಸನ ಬಗೆಗೆ ಹೇಳುವಾಗ ಅವರಿಗೆ ಒಂದು ಬಗೆಯ ಆವೇಶ, ಭಾವುಕ ಪ್ರಶಂಸೆ. ನಾನು ವಿದ್ಯಾರ್ಥಿಯಾಗಿದ್ದ ಕಾಲದಲ್ಲಿ ಕುಮಾರವ್ಯಾಸಜಯಂತಿಯ ವ್ಯವಸ್ಥೆ, ಪ್ರಸಿದ್ಧ ಗಮಕಿಗಳಿಂದ ಕುಮಾರವ್ಯಾಸ ಭಾರತ ಪ್ರಕರಣಗಳ ವಾಚನ ಸಪ್ತಾಹ, ಕವಿ-ಕಾವ್ಯ ಕುರಿತ ಉಪನ್ಯಾಸಗಳು- ಇವೆಲ್ಲವುಗಳ ಯಶಸ್ವೀ ನಿರ್ವಹಣೆಗೆ ವೆಂಕಣಯ್ಯನವರು ಸೂತ್ರಧಾರರು; ಪ್ರೇರಣೆ, ಸ್ಫೂರ್ತಿ, ಬಿ. ಎಂ. ಶ್ರೀ. ಉತ್ಸವಮೂರ್ತಿ ವೆಂಕಣ್ಣಯ್ಯನವರು; ಮೂಲವರು ಬಿ. ಎಂ. ಶ್ರೀ.; ತೀ. ನಂ. ಶ್ರೀ., ಯು. ಶ್ರೀನಿವಾಸರಾವ್, ಡಿ. ಎಲ್. ಎನ್., ಅನಂತರಂಗಾಚಾರ್, ಎಂ. ಪಿ. ಎಲ್. ಶಾಸ್ತ್ರಿ, ಪುಟ್ಟ ನಂಜಪ್ಪ, ಮುಂತಾದ ಪರಿಚಾರಕರ ಸಾಲಿನಲ್ಲಿ ನಾನು ಕಟ್ಟಕಡೆಯವನು. ಅದೇ ವರ್ಷ (1930) ಕುಮಾರವ್ಯಾಸ ಭಾರತದ ಸಂಗ್ರಹವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಿದ್ಧಪಡಿಸಿಕೊಡಬೇಕೆಂದು ವೆಂಕಣಯ್ಯನವರು ಮತ್ತು ಪಂಜೆ ಮಂಗೇಶರಾಯರಿಗೆ ಶ್ರೀಯವರ ಕೋರಿಕೆ. ಈ ಸಂಗ್ರಹಕಾರ್ಯದ ಹಿಂದೆ ಒಂದು ಸಣ್ಣ ಚರಿತ್ರೆ ಅಡಗಿದೆ. ಅದು ಈಚೆಗೆ ತಿಳಿದುಬಂಡ ಸಂಗತಿ, ಇಲ್ಲಿಗೆ ಅಪ್ರಸ್ತುತ. ಸಿದ್ಧವಾದ ಸಂಗ್ರಹದ ಹಸ್ತಪ್ರತಿಯಲ್ಲಿ ಪಾಠಾಂತರ ಸಂಕಲನವನ್ನು ಪರಿಶೀಲಿಸಿ, ಉಚಿತಪಾಠವನ್ನು ಆಯ್ಕೆ ಮಾಡಿದವರು ಬಿ. ಎಂ. ಶ್ರೀ. ಪಂಪಭಾರತದ ಸಂಪಾದನಕಾರ್ಯದಲ್ಲಿಯೂ ಬಿ. ಎಂ. ಶ್ರೀ. ಅವರದ್ದು ಕೊನೆಯ ಮಾತು- ಒಂದು ಮಾತಿನಲ್ಲಿ, ಪಂಪ ಹೆಚ್ಚೋ ಕುಮಾರವ್ಯಾಸ ಹೆಚ್ಚೋ ಕನ್ನಡ ಕವಿಕುಲದಲ್ಲಿ? ಒಮ್ಮೆ ಅವನ ಕಡೆಗೆ, ಒಮ್ಮೆ ಇವನ ಕಡೆಗೆ, ಶ್ರೀಯವರ ಮೆಚ್ಚುಗೆ, ವಿಮರ್ಶನಪ್ರಜ್ಞೆಯ ಫಲಿತವಾದ ಮೆಚ್ಚುಗೆ- ಒಲೆದಾಡುತ್ತಿತ್ತು. ಈ ಇಬ್ಬರು, ಕನ್ನಡ ಶಾರದೆಯ ಎರಡು ಕಣ್ಣು. ಅವರ ನಿಲುವು ಇದು. ದುರಂತ ರಾವಣನ ಚಿತ್ರಣಕ್ಕಾಗಿ ನಾಗಚಂದ್ರ ಅವರಿಗೆ ಪ್ರಿಯ. ಬಸವಣ್ಣ, ಪುರಂದರರಿಗೆ, ಸಮಾನೋಕ್ತಿಯ ಪೀಠಗಳು; ಕವಿಗಳಲ್ಲದಿದ್ದರೂ

ಸಾಹಿತ್ಯಕ್ಕೆ, ಕನ್ನಡಿಗರ ಬದುಕಿಗೆ, ಇವರ ಕೊಡುಗೆ ವಿಶಿಷ್ಟ.- ಆದರೂ ಬಸವಣ್ಣನವರ ಕಡೆಗೆ ಒಂದು ಗುಲಗಂಜಿ ತೂಕದಷ್ಟು ಹೆಚ್ಚಿನ ಒಲವು. ಹರಿಹರ, ರಾಘವಾಂಕ, ಚಾಮರಸ, ಲಕ್ಷ್ಮೀಶ, ರತ್ನಾಕರ-ಇವರ ಕಾವ್ಯಗಳ ಬಗೆಗೆ ಹೇಳುವ ಹೊತ್ತಿಗೆ, ಶ್ರೀಯವರ ಆವೇಶದ ಕಾವು ಇಳಿಮುಖ. ಮಹಾದೇವಿಯಕ್ಕ, ಹೊನ್ನಮ್ಮ- ಇವರ ವಿಷಯದಲ್ಲಿ ದಯಾಯಿತಿ ತೋರಿಯೂ ಪ್ರಾಮಾಣಿಕವಾದ ಮೆಚ್ಚುಗೆ. ಇತರ ಕವಿಗಳ, ಕೃತಿಗಳ, ಕಾಲಗಳ, ವಿಚಾರ ಉಲ್ಲೇಖಯೋಗ್ಯ- ಬೋರ್ಡಿನ ಮೇಲೆ ಸೀಮೆಯ ಸುಣ್ಣದ ಬರಹ ಮಾತ್ರ ಇವರಿಗೆ ಅವರ ಕೈಯಿಂದ ಸಂದ ಮನ್ನಣೆ.

ಮೇಲಿನ ಕೊನೆಯ ವಾಕ್ಯದಿಂದಲೇ ಊಹಿಸಿಕೊಳ್ಳಬಹುದು ಓದುಗರು- 'ಶ್ರೀ'ಯವರು ಎಂ. ಎ. ತರಗತಿಯ ನಾವು ಮೂವರು ವಿದ್ಯಾರ್ಥಿಗಳು, ಆಗತಾನೆ ಪ್ರಾರಂಭವಾಗಿದ್ದ ಕನ್ನಡ ಆನರ್ಸ್ ಪರೀಕ್ಷೆಯ ಏಳೆಂಟು ವಿದ್ಯಾರ್ಥಿಗಳು-ಇವರನ್ನು ಒಟ್ಟುಗೂಡಿಸಿ ಹೇಳಿದ ಸಾಹಿತ್ಯ ಚರಿತ್ರೆಯ ಪಾಠಕ್ಕೆ ಸಂಬಂಧಪಟ್ಟ ವಿಷಯ ಇದು ಎಂದು. ಹೌದು, ನಮಗೆ ಮಾತ್ರವಲ್ಲ, ಬಹುಶಃ ಎಲ್ಲ ಎಂ. ಎ. ತರಗತಿಯ ವಿದ್ಯಾರ್ಥಿಗಳಿಗೆ ಮಾಡಿರ ಬಹುದಾದ ಸಾಹಿತ್ಯ ಚರಿತ್ರೆಯ ಪಾಠದ ಒಂದು ದಿಗ್ದರ್ಶನ ಅದು. ಕಿಟೆಲ್ ಅವರು ಸಂಪಾದಿಸಿರುವ ಛಂದೋಂಬುಧಿಯ ಮುದ್ರಣಕ್ಕೆ ಇಂಗ್ಲಿಷಿನಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಬರೆದ ಮುನ್ನುಡಿ, ಇ. ಪಿ. ರೈಸ್ ಅವರ Heritage of India ಪುಸ್ತಕಮಾಲಿಯ 'ಕನ್ನಡ ಸಾಹಿತ್ಯ,' ಆರ್. ನರಸಿಂಹಾಚಾರ್ಯರ ಕವಿಚರಿತೆಯ ಸಂಪುಟಗಳು-ಇವು ಮಾತ್ರ ಇದ್ದವು. ಕವಿ-ಕೃತಿಗಳ ಬಗೆಗೆ ವಿಮರ್ಶಾತ್ಮಕ ಮೌಲ್ಯಮಾಪನ ಮಾಡುವ ಒಂದು ಸಾಹಸದ ಪ್ರಥಮಪ್ರಯತ್ನ, ತಕ್ಕಮಟ್ಟಿಗೆ ವಿಸ್ತಾರವಾದದ್ದು, ಅವುಗಳಲ್ಲಿ ಇಲ್ಲ. 'ಶ್ರೀ'ಅವರ ಸೂಚನೆಯ ಮೇರೆಗೆ ಆ ಗ್ರಂಥಗಳನ್ನು ನಾನಂತೂ ಓದಿ ನೋಡಿದ್ದೆ. ಕವಿಗಳ ಸ್ಥಳ, ಕಾಲ, ಮತ ವಿಷಯಗಳ ಚರ್ಚೆಗೆ ಆಗಿನ ದಿನಗಳಲ್ಲಿ ಪ್ರಾಮುಖ್ಯ. ಆದ್ದರಿಂದ, ನರಸಿಂಚಾರ್ಯರ ಕವಿಚರಿತೆಯನ್ನೂ ಪ್ರಬುದ್ಧ ಕರ್ಣಾಟಕದಲ್ಲೂ ಪರಿಷತ್ ಪತ್ರಿಕೆಯಲ್ಲೂ ಪ್ರಕಟವಾಗಿದ್ದ

ಲೇಖನಗಳನ್ನೂ ಓದಿಕೊಂಡಿದ್ದೆ. ಆದರೆ, ಬಿ. ಎಂ. ಶ್ರೀ. ತಮ್ಮ ಪಾಠ ಪ್ರವಚನದಲ್ಲಿ ಕವಿಕೃತಿಗಳಿಂದ ಹಿಂಡಿ ತೆಗೆದು ಎರೆಯುತ್ತಿದ್ದ ಕಾವ್ಯ ಸುಧಾಸಾರ; ತೆರೆದು ತೋರಿಸುತ್ತಿದ್ದ ಕಾವ್ಯಮೌಲ್ಯಗಳು; ಮಿಂಚಿಸುತ್ತಿದ್ದ, ಕಟುವಾದರೂ ಸತ್ಯವಾದ, ಎದೆಗಾರಿಕೆಯ ನಿಷ್ಪಕ್ಷಪಾತ ವಿಮರ್ಶೆಯ ಮಾತುಗಳು; ಕವಿಹೃದಯವನ್ನು ಒಳಹೊಕ್ಕು ನೋಡಬಲ್ಲ ಚುರುಕಾದ ಒಳನೋಟ; ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಒಮ್ಮೊಮ್ಮೆ ಮೇಲುಗೈಯಾಗಿ ವಿಜೃಂಭಿಸುತ್ತಿದ್ದ ವಿಭಿನ್ನ ಮತಧರ್ಮಗಳ ಬಗ್ಗೆ ಸಮಾನ ಗೌರವ; ಕಾವ್ಯದಲ್ಲಿ ಗ್ರಹಿಸಬೇಕಾದ ಜೀವನದರ್ಶನ, ಸಾರ್ವಕಾಲಿಕ ಸಾರ್ವತ್ರಿಕ ಮೌಲ್ಯಗಳು–ಇವನ್ನೆಲ್ಲಾ, ಇವಲ್ಲದೆ ಇನ್ನೂ ಅನೇಕ ಆನುಷಂಗಿಕ ವಿಚಾರಗಳನ್ನು, ಪ್ರತಿ ಕವಿಯ ಭಾಷಾಶೈಲಿ, ಛಂದಸ್ಸಿನ ಪ್ರಯೋಗಕೌಶಲ, ಅಲಂಕಾರ ಪ್ರಿಯತೆ, ಕೆಲವು ಕವಿಗಳ ಸಂಸ್ಕೃತವ್ಯಾಮೋಹ, ಅಷ್ಟಾದಶವರ್ಣನೆ ಮತ್ತು ಕವಿಸಮಯಗಳ ಅನಗತ್ಯಭಾರ, ಮುಂತಾದುವನ್ನೆಲ್ಲ ನಾಗಾಲೋಟದ ಅಶ್ವಧಾಟಿಯಲ್ಲಿ ಪಾಠಪ್ರವಚನ ಸಪ್ತಾಹದಲ್ಲಿ ಮುಗಿಸಿ, ಒಂದು ಹೊಸ ಸಾಹಿತ್ಯ ಪ್ರಪಂಚವನ್ನೆ ಸೃಷ್ಟಿಮಾಡಿಬಿಟ್ಟರು. ಆ ದಿನಗಳಲ್ಲಿ ಅವರು ಹೇಳಿದ ಪಾಠವೇ ಮುಂದೆ "ಕನ್ನಡ ಕೈಪಿಡಿ"ಯ ರೂಪದಲ್ಲಿ ಎರಡನೆಯ ಸಂಪುಟವಾಗಿ 1947ರಲ್ಲಿ, ಅವರು ತೀರಿಕೊಂಡಮೇಲೆ, ಪ್ರಕಟವಾಯಿತು. ಈ ಪುಸ್ತಕ ಅವರು ಬರೆಯಬೇಕೆಂದಿದ್ದ ಸಮಗ್ರ ಸಾಹಿತ್ಯ ಚರಿತ್ರೆಯ ಒಂದು ಭಾಗ,ಅಷ್ಟೆ; ನಾಗಚಂದ್ರನ ವರೆಗೆ ಮಾತ್ರ ಸಾಗಿದೆ. ಪೂರ್ಣ ಗ್ರಂಥ ನಮಗೆ ಲಭಿಸಲಿಲ್ಲ. ಎಂಥ ದುರ್ದೈವ ನಮ್ಮದು!

ಮೇಲೆ ಪಾಠಪ್ರವಚನ ಸಪ್ತಾಹ ಎಂದು ಹೇಳಿದ್ದೇನೆ. ಈ ಕುರಿತು ವಿವರಣ ರೂಪದಲ್ಲಿ ನಾಲ್ಕು ಮಾತು ಹೇಳಬೇಕು. ನಮಗೆ ಬಿ. ಎಂ. ಶ್ರೀ. ಸಾಹಿತ್ಯ ಚರಿತ್ರೆಯ ಪಾಠ ಮಾಡಿದ್ದು 1933ರ ಮಾರ್ಚ್ ತಿಂಗಳಿನಲ್ಲಿ ಎಂದು ನೆನಪು. ಆಗ ಅವರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರು. ಅಲ್ಲಿ ತಮ್ಮ ಪಾಠಪ್ರವಚನಗಳ ಕರ್ತವ್ಯವನ್ನು ನೆರವೇರಿಸಿ ಮೊದಲೆ ಗೊತ್ತಾಗಿದ್ದಂತೆ ನಮಗೆ ಸಾಹಿತ್ಯ ಚರಿತ್ರೆಯನ್ನು ಬೋಧಿಸಲು

ಮೈಸೂರಿಗೆ ಬಂದರು. ಕಾಲೇಜಿನ ಮಹಡಿಯ ಮೇಲಿನ ಉತ್ತರ ದಿಕ್ಕಿನ ಪಾರ್ಶ್ವದ ಮೂಲೆಯ ಕೋಣೆಯಲ್ಲಿ ಪಾಠ. ಪ್ರತಿ ದಿನವೂ ಬೆಳಿಗ್ಗೆ 11 ಘಂಟೆಯಿಂದ ಸಂಜೆ 5ರ ವರೆಗೂ ಅವಿಶ್ರಾಂತ ಉಪನ್ಯಾಸ. ಅವರಿಗೂ ವಿಶ್ರಾಂತಿಯಿಲ್ಲ, ವಿದ್ಯಾರ್ಥಿಗಳಿಗೂ ವಿಶ್ರಾಂತಿಯಿಲ್ಲ. ಮಧ್ಯೆ ವಿರಾಮವೂ ಇಲ್ಲ, ಕಾಫಿಯೂ ಇಲ್ಲ. ನಡುನಡುವೆ ಬೋರ್ಡಿನಮೇಲೆ ಆಗೊಮ್ಮೆ ಈಗೊಮ್ಮೆ ಕವಿಕೃತಿಗಳ ಕಾಲ, ಮುಂತಾದ ನೆನಪಿಡಬೇಕಾದ ಸಂಗತಿಗಳನ್ನು ಗುರುತಿಸುತ್ತಿದ್ದರು—ಬಡವಿದ್ಯಾರ್ಥಿಗಳ ಬಳಿ ಕವಿಚರಿತೆಯ ಸಂಪುಟಗಳು ಇರಲಾರವು ಎಂಬ ಎಣಿಕೆಯಿಂದ. ಕಡೆಯ ಪಕ್ಷ ಐದು ಗಂಟೆಗಳ ಅಖಂಡ ವಾಗ್ಧಾರೆ; ಕನ್ನಡ ಕಾವ್ಯಕಾವೇರಿಯ ಪ್ರವಾಹ. ರಸ-ಸಮಾರಾಧನ ಸಪ್ತಾಹ. ಅದೆಂತಹ ದೈತ್ಯಶಕ್ತಿ! ಅದೆಂತಹ ವೇಗದ ಮಾತುಗಾರಿಕೆ! ಟಿಪ್ಪಣಿ ತೆಗೆದುಕೊಳ್ಳುವುದಕ್ಕಂತೂ ಸಾಧ್ಯವೇ ಇರಲಿಲ್ಲ. ಪರೀಕ್ಷಾನಿಷ್ಠ ವಿದ್ಯಾರ್ಥಿಗಳು ಟಿಪ್ಪಣಿ ತೆಗೆದುಕೊಳ್ಳುವ ಸಾಹಸವನ್ನೇನೋ ಮಾಡಿದರು. ಜಗತ್ತಿನಲ್ಲಿ ಎಲ್ಲಿಯೋ ಆಗಲಿ ಈ ರೀತಿ ಏಳು ದಿನ ಅಖಂಡ ಪಾಠಪ್ರವಚನ ಮಾಡಿದ ದಾಖಲೆ ಇದೆಯೋ ಇಲ್ಲವೋ ನಾನು ಕಾಣೆ. ಗಿನ್ನೆಸ್ ಬುಕ್‌ನಲ್ಲಿ ದಾಖಲೆಯಾಗಲು ಯೋಗ್ಯವಾದ ಪರಮ ದಾಖಲೆ.

ಬಿ. ಎಂ. ಶ್ರೀ. ನನಗೆ ಮಾತ್ರ ಉಪಾಧ್ಯಾಯರಾಗಿರಲಿಲ್ಲ, ಕನ್ನಡ ನಾಡಿಗೇ ಉಪಾಧ್ಯಾಯರು; ನಾಡೋಜರು. ಕನ್ನಡ ತಲೆ ಎತ್ತಿ "ಅಕ್ಕತಂಗಿಯರೊಡನೆ ನಾನು ಸಮ ನಿಮಗೆಂದು" ನಿಲ್ಲುವುದಕ್ಕಾಗಿ, ಕನ್ನಡ ಜನ ಒಂದು ಕುಲವಾಗಿ ಒಂದುಗೂಡಿ ಬದುಕುವುದಕ್ಕಾಗಿ, ಕನ್ನಡದ ಎಲ್ಲ ಮಕ್ಕಳೂ ಹಳಗನ್ನಡ ಸಾಹಿತ್ಯವನ್ನು ಓದಿಕೊಂಡು ಮೆಚ್ಚಿಕೊಂಡು ಹೆಮ್ಮೆ ಪಡುವುದಕ್ಕಾಗಿ, ಹೊಸ ಸಾಹಿತ್ಯವನ್ನು ಸೃಷ್ಟಿಸಲು ಸ್ಫೂರ್ತಿ ಪಡೆಯುವುದಕ್ಕಾಗಿ, "ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ ನಿಬೋಧತ" ಎಂದು ಕನ್ನಡ ಕುಲಕೋಟಿಯನ್ನು ಎಚ್ಚರಿಸುವುದಕ್ಕಾಗಿ ಕನ್ನಡ ನಾಡನ್ನೆಲ್ಲ ಸುತ್ತಿ ನಾಸು ಹೊಕ್ಕು ಹರಿದು ಕನ್ನಡ ಕಾವ್ಯಸಂಪತ್ತನ್ನು ಕುರಿತು, ಕನ್ನಡ ಸಮಸ್ಯೆಗಳನ್ನು ಕುರಿತು, ನಾಡ ಹಬ್ಬಗಳಲ್ಲಿ ಸಂಘ ಸಂಸ್ಥೆಗಳ ವಾರ್ಷಿಕ ಸಭೆ

ಸಮಾರಂಭಗಳಲ್ಲಿ ಗಂಟೆಗಟ್ಟಲೆ ಉಪನ್ಯಾಸ ಮಾಡಿದರು. ಕನ್ನಡ ಬಳಗ ಗಳನ್ನು ಕಟ್ಟಿದರು, ಸಂಘಗಳನ್ನು ಹುಟ್ಟುಹಾಕಿದರು, ಮುಗುಳರಳುತ್ತಿದ್ದ ಕವಿಗಳ ಬೆನ್ನು ತಟ್ಟಿದರು, ಸಲವನ್ನು ಊಡಿದರು, ತಿಳಿವನ್ನು ನೀಡಿದರು. ಕನ್ನಡ ತಾಯ ಹಿರಿಮೆಯೆನ್ನು ಕೊಂಡಾಡಿದರು. ಧನ್ಯೋಸ್ಮಿ ಎಂದು ನಲಿದಾಡಿದರು.

**ಹಳಗನ್ನಡದ ನಾಡೋಜ, ಪಂಪ.**
**ಹೊಸಗನ್ನಡದ ನಾಡೋಜ, ಬಿ. ಎಂ. ಶ್ರೀ.**



ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನಕ್ಕೆ ಕಾಣಿಕೆ
ಎಂ. ವಿ. ಸೀ. ಅವರ ಪುಸ್ತಕಗಳು
[ ಸೆಟ್ಟಿಗೆ ರೂ. 35-00 ]

ಸೆಟ್ ಪುಸ್ತಕಗಳು :

| | | | |
|---|---|---|---|
| 1. | ಕವಿಯ ಹೆಂಡತಿ (ನಾಟಕ) | 2 | 00 |
| 2. | ಸ್ವಯಂವರ (ನಾಟಕ) | 2 | 00 |
| 3. | ಸ್ನೇಹದ ಕಾಣಿಕೆ (ಕಾದಂಬರಿ) | 3 | 20 |
| 4. | ಬಾಳಿನ ಬುತ್ತಿ (ಪ್ರಬಂಧ ಸಂಕಲನ) | 4 | 00 |
| 5. | ಹೊಸಗನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು | 5 | 00 |
| 6. | ಗೀತಭಾರತಿ (ಕವನ ಸಂಕಲನ) | 5 | 00 |
| 7. | ಹಂಸ ಪಥ (ಕವನ ಸಂಕಲನ) | 10 | 00 |
| 8. | ಮುಗಿಯದ ಮಾಯೆ (ಕವನ ಸಂಕಲನ) | 5 | 00 |
| 9. | ರಾಘವ ಕವನಕೋಶ (6, 7, 8ರ ಕೂಡು ಪುಸ್ತಕ) (ಸೆಟ್‌ಗೆ 6, 7, 8 ಅಥವಾ 9 ಮಾತ್ರ) | 20 | 00 |
| 10. | ನಿಲ್ದಾಣಗಳ ನಡುವೆ (ಕಥಾ ಸಂಕಲನ) | 20 | 00 |

ಹೊಸ ಪ್ರಕಟನೆಗಳು :

| | | | |
|---|---|---|---|
| 1. | ಕನ್ನಡಮ್ಮನ ಕೊರಗು | 8 | 00 |
| 2. | ಮೊದಲ ಹೆಜ್ಜೆ (ಕವಿತೆ) | 5 | 00 |
| 3. | ನಾಡೋಜ ಬಿ ಎಂ. ಶ್ರೀ. | 5 | 00 |

ಶ್ರೀ ರಾಮಕೃಷ್ಣ ಪವರ್ ಪ್ರೆಸ್, ಬೆಂಗಳೂರು-19.